# ರಾಜ್ಯಮಟ್ಟದ ಪ್ರಥಮ ಕವನ ಗಾಯನ ಕಾರ್ಯಾಗಾರ

ಕರ್ನಾಟಕ ರಾಜ್ಯ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ, ಬೆಂಗಳೂರು ಮತ್ತು ಜಿಲ್ಲಾ ಸಂಸ್ಥೆ, ಧಾರವಾಡ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 1-8-96 ರಿಂದ 5-8-96ರ ವರೆಗೆ ಧಾರವಾಡ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ರಾಜ್ಯ ಮಟ್ಟದ ಪ್ರಥಮ ಕವನ ಗಾಯನ ಕಾರ್ಯಾಗಾರವು ನಡೆಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ 65 ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದರು. ಈ ಕಾರ್ಯಾಗಾರದಲ್ಲಿ ವಿವಿಧ ಕವಿಗಳ ಕವನಗಳನ್ನು ಹಾಡಿ, ಶಿಕ್ಷಕರಿಗೆ ಕಲಿಸಲಾಯಿತಲ್ಲದೆ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಶಿಕ್ಷಣದಲ್ಲಿ ಕವನ ಗಾಯನವನ್ನು ಒಂದು ಸಾಧನವನ್ನಾಗಿ ಮಾಡಲು ಪ್ರಯತ್ನ ಮಾಡಲಾಯಿತು. ಶ್ರೀ ಎಂ. ಎಂ. ಲೋಂಡೆ ನಾಯಕರಾಗಿ, ಶ್ರೀಮತಿ ಪ್ರೇಮಾ ಮಂಗಳೂರ, ನಿರ್ಮಲಾ ಹಳಕಟ್ಟಿ, ಪ್ರಭಾ ಲೋಂಡೆ ಸಹಾಯಕರಾಗಿ ಕಾರ್ಯ ನಿರ್ವಹಿಸಿದರು, ಶ್ರೀ ವಸಂತ ಕನಕಾಪೂರ ಹಾಗೂ ಶ್ರೀ ವಾದಿರಾಜ ನಿಂಬರಗಿ ಇವರು ಸಂಗೀತ ಸಂಯೋಜನೆ ಮಾಡಿದರು. ದಿನಾಂಕ 1 ರಂದು ನಡೆದ ಉದ್ಘಾಟನಾ ಸಮಾರಂಭದಲ್ಲಿ ಶ್ರೀಮತಿ ಅನ್ನಪೂರ್ಣ ಕಡಕೋಳ ಇವರು ಮುಖ್ಯ ಅತಿಥಿಗಳಾಗಿ ಹಾಗೂ ಬೆಂಗಳೂರಿನ ಕರ್ನಲ್ ಹರಿದೇವ ಕಾಟ್ಕರ ಇವರು ಅಧ್ಯಕ್ಷರಾಗಿ ಆಗಮಿಸಿದ್ದರು.




ಧಾರವಾಡದಲ್ಲಿ ಆಗಸ್ಟ್ 1 ರಿಂದ 5ರ ವರೆಗೆ ನಡೆದ ರಾಜ್ಯಮಟ್ಟದ ಪ್ರಥಮ ಕವನ ಗಾಯನ ಕಾರ್ಯಾಗಾರದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಖ್ಯಾತ ಹಿಂದೂಸ್ಥಾನೀ ಗಾಯಕಿ ಡಾ॥ ಗಂಗೂಬಾಯಿ ಹಾನಗಲ್‌ರವರನ್ನು ಶಾಲು ಹೊದಿಸಿ ಸನ್ಮಾನಿಸಿದರು

ದಿನಾಂಕ 4-8-96 ರಂದು ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ನಾಡಿನ ಹೆಸರಾಂತ ಸಂಗೀತ ವಿದುಷಿ ಡಾ॥ ಗಂಗೂಬಾಯಿ ಹಾನಗಲ್ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. "ಕವನ ಚೇತನ" ಎಂಬ ಧ್ವನಿ ಸುರುಳಿಯನ್ನು ಬಿಡುಗಡೆ ಮಾಡುತ್ತಾ, ಮಾತನಾಡಿದ ಡಾ॥ ಗಂಗೂಬಾಯಿ ಹಾನಗಲ್ಲ ಇವರು ರಾಜ್ಯಮಟ್ಟದ ಈ ಕವನ ಗಾಯನ

ಕಾರ್ಯಾಗಾರದ ಮುಖಾಂತರ ಇಡೀ ನಾಡಿನ ತುಂಬೆಲ್ಲಾ ಪ್ರಸಾರ ಮಾಡುವ ಪ್ರಥಮ ಹೆಜ್ಜೆ ಇಟ್ಟ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು. ಸಂಗೀತವು ಪ್ರತಿಯೊಬ್ಬರ ಜೀವನಕ್ಕೆ ಅವಶ್ಯಕವಾದ ಅಂಶ ಎಂದು ಹೇಳಿದರು. ಇದನ್ನು ಸ್ಕೌಟ್ ಮತ್ತು ಗೈಡ್ ಮಕ್ಕಳ ಮುಖಾಂತರ ಕಲಿಸುವ ಈ ಸಂಸ್ಥೆಯ ಯೋಜನೆಯು ಶ್ಲಾಘನೀಯ ವಾದುದು ಎಂದು ಹೇಳಿದರು. ಅಧ್ಯಕ್ಷತೆ ವಹಿಸಿದ್ದ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಇವರು ಮಾತನಾಡುತ್ತಾ ರಾಜ್ಯ ಸಂಸ್ಥೆಯು ಹಮ್ಮಿಕೊಂಡಿರುವ ಯೋಜನೆಗಳಲ್ಲಿ ಪ್ರಥಮ ಹಂತವನ್ನು ತಕ್ಷಣ ಕಾರ್ಯರೂಪಕ್ಕೆ ತಂದು ಬಹಳ ಯಶಸ್ವೀ ರೀತಿಯಿಂದ ಕಾರ್ಯಾಗಾರ ನಡೆಸಿದ ಧಾರವಾಡ ಜಿಲ್ಲಾ ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೆ ಅಭಿನಂದನೆ ಸಲ್ಲಿಸಿದರು. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಪ್ರಯತ್ನಕ್ಕೆ ರಾಜ್ಯದಲ್ಲಿ ಅವಕಾಶ ಕೊಡ ಲಾಗುವುದೆಂದು ಭರವಸೆ ನೀಡಿದರು. ಡಾ|| ಗಂಗೂಬಾಯಿ ಹಾನಗಲ್ ಅವರನ್ನು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ನವರು ಶಾಲು ಹೊದಿಸಿ ಸತ್ಕರಿಸಿದರು. ರಾಜ್ಯದ ಮುಖ್ಯ ಆಯುಕ್ತರಾಗಿ ಮತ್ತೆ ಅವಿರೋಧವಾಗಿ ಆಯ್ಕೆಯಾದ ಶ್ರೀ ಕೆ. ಬಿ. ಷಣ್ಮುಖಪ್ಪನವರನ್ನು ಜಿಲ್ಲಾ ಸಂಸ್ಥೆಯ ವತಿಯಿಂದ, ಉಪಾಧ್ಯಕ್ಷರಾದ ಶ್ರೀ ಬಿ. ಜಿ. ದೊಡ್ಡಮನಿಯವರು ಶಾಲು ಹೊದಿಸಿ ಸತ್ಕರಿಸಿದರು. ಶ್ರೀ ಎಂ. ಎಂ. ಲೋಂಡೆಯವರು ಸ್ವಾಗತಿಸಿ ಅತಿಥಿಗಳ ಪರಿಚಯ ಮಾಡಿದರು. ಶ್ರೀಮತಿ ಪ್ರೇಮಾ ಮಂಗಳೂರ ಇವರು ವಂದನಾರ್ಪಣೆಯನ್ನು ಮಾಡಿದರು. ಶಿಬಿರಾರ್ಥಿಗಳಾದ ಶ್ರೀ ಎಲ್ಲೇಗೌಡ, ಪೂರ್ಣಿಮಾ ಮತ್ತು ಕಾಟ್ಕರ ಇವರುಗಳು ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದರು. ಸಮಾರಂಭದಲ್ಲಿ ಅನೇಕ ಗಣ್ಯರು ಮತ್ತು ರಾಜ್ಯ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಕೆ. ತಿಮ್ಮಪ್ಪ, ಮಹಮ್ಮದ್ ವಾಸೀಲ್, ಚಿನ್ನಸ್ವಾಮಿ ರೆಡ್ಡಿ, ಶ್ರೀಮತಿ ಸರೋಜ ಹಾಗೂ ಕಮಲಾಕ್ಷಮ್ಮ ಇವರುಗಳೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎಂ. ಜಿ. ಭಿಲ್ಲೆ, ಶ್ರೀಮತಿ ಅನ್ನಪೂರ್ಣ ಕಡಕೋಳ ಇವರುಗಳೂ ಹಾಜರಿದ್ದರು.

---

## ಉತ್ತಮ ಶಿಕ್ಷಕ ಪ್ರಶಸ್ತಿ ವಿಜೇತರು

**ರಾಷ್ಟ್ರಪತಿ ಪ್ರಶಸ್ತಿ ವಿಜೇತರು**

5-9-1996 ರಂದು ರಾಜ್ಯ ಸಹ ಕಾರ್ಯದರ್ಶಿ ಶ್ರೀ ಸಿ. ಎಸ್. ರೆಡ್ಡಿಯವರು, ದೆಹಲಿಗೆ ತೆರಳಿ ರಾಷ್ಟ್ರಪತಿ ಯವರಾದ ಡಾ|| ಶಂಕರ್ ದಯಾಳ್ ಶರ್ಮರವರಿಂದ ರಾಷ್ಟ್ರಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿಯನ್ನು ಸ್ವೀಕರಿಸಿದರು.

**ರಾಜ್ಯ ಪ್ರಶಸ್ತಿ ವಿಜೇತರು**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರೂ, ಸ್ಕೌಟ್ ಮಾಸ್ಟರೂ ಆದ ಶ್ರೀ ಸಿದ್ದಪ್ಪ ಇವರಿಗೆ 1996ನೇ ಸಾಲಿನ "ರಾಜ್ಯಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿ"ಯು ದೊರಕಿರುವುದನ್ನು ತಿಳಿಸಲು ಹರ್ಷಿಸುತ್ತೇವೆ.

ಹಿಮಾಲಯ ವುಡ್‌ಬ್ಯಾಡ್ಜ್‌ಧಾರಿಗಳಾದ ಶ್ರೀ ಸಿದ್ದಪ್ಪನವರು ಈಗ್ಗೆ 15 ವರ್ಷಗಳಿಗೂ ಮೇಲ್ಪಟ್ಟು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಾ, ಉತ್ತಮ ರೀತಿಯಲ್ಲಿ ಸ್ಕೌಟ್‌ದಳವನ್ನು ನಡೆಸುತ್ತಿದ್ದಾರೆ. ಇವರಿಗೆ ದೀರ್ಘ ಸೇವಾ ಪ್ರಶಸ್ತಿಯು ಸಂಸ್ಥೆಯಿಂದ ಈಗಾಗಲೇ ಬಂದಿರುತ್ತದೆ.

ಅದೇ ರೀತಿ ಕೋಲಾರ ಜಿಲ್ಲೆ, ಶಿಡ್ಲಘಟ್ಟ ತಾ||, ಜಂಗಮಕೋಟೆ ಬಳಿಯ ಹೊಸಪೇಟೆ ಸ|| ಪ್ರಾಥಮಿಕ ಶಾಲಾ ಶಿಕ್ಷಕ ಶ್ರೀ ನಂದೀಶ್ರವರಿಗೆ ರಾಜ್ಯಮಟ್ಟದ "ಉತ್ತಮ ಶಿಕ್ಷಕ" ಪ್ರಶಸ್ತಿಯು ದೊರಕಿದೆ. ಬಹಳ ಸಂತೋಷ.

ಹಿಮಾಲಯ ವುಡ್‌ಬ್ಯಾಡ್ಜ್ ಧಾರಿಗಳಾದ ಶ್ರೀ ನಂದೀಶ್ರವರು ಉತ್ತಮ ಸ್ಕೌಟರ್ ಆಗಿರುತ್ತಾರೆ.

ರಾಜ್ಯ ಮುಖ್ಯ ಆಯುಕ್ತರು ಹಾಗೂ ಇತರ ಪದಾಧಿಕಾರಿಗಳ ಪರವಾಗಿ ಈ ಇಬ್ಬರೂ ಶ್ರೀಯುತರುಗಳನ್ನು ಅಭಿನಂದಿಸುತ್ತೇವೆ. ಇವರುಗಳಿಗೆ ಮುಂದೆ ರಾಷ್ಟ್ರಪ್ರಶಸ್ತಿಯೂ ದೊರಕಲಿ, ಅವರುಗಳಿಂದ, ಸ್ಕೌಟ್/ಗೈಡ್ ಸಂಸ್ಥೆಗೆ ಇನ್ನೂ ಹೆಚ್ಚಿನ ಸೇವೆಯು ದೊರಕುವಂತಾಗಲಿ ಎಂದು ಆಶಿಸುತ್ತೇವೆ.

---

# ಅಲ್ಲಲ್ಲಿ ಏನೇನು ?

## ಬಳ್ಳಾರಿ ಜಿಲ್ಲೆ

ಭಾರತ ಸ್ಕೌಟ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಬಳ್ಳಾರಿ ಇವರು ಜಿಲ್ಲಾ ಪಂಚಾಯಿತಿ, ಬಳ್ಳಾರಿ ಮತ್ತು ವಲ್ಲಭಾಪುರ ಗ್ರಾಮ ಪಂಚಾಯಿತಿ ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 24–8–96 ರಿಂದ 28–8–96ರ ವರೆಗೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ವಲ್ಲಭಾಪುರ ಗ್ರಾಮದಲ್ಲಿ ಸಮುದಾಯ ಅಭಿವೃದ್ಧಿ ಸೇವಾ ಶಿಬಿರವನ್ನು ನಡೆಸಿದರು. ಈ ಶಿಬಿರದಲ್ಲಿ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ 108 ಸ್ಕೌಟ್‌ಗಳು, 16 ಗೈಡ್‌ಗಳು ಹಾಜರಾಗಿದ್ದರು. ಇವರ ಜೊತೆಗೆ 14 ಸ್ಕೌಟರ್‌ಗಳು ಮತ್ತು 4 ಗೈಡರ್‌ಗಳೂ ಪಾಲ್ಗೊಂಡಿದ್ದರು.

ಜಿಲ್ಲಾ ತರಬೇತಿ ಆಯುಕ್ತ ಶ್ರೀ ಪಿ. ಮಂಜುನಾಥಪ್ಪ ಎ.ಎಲ್.ಟಿ. (ಸ್ಕೌಟ್ಸ್) ಇವರು ಈ ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು. ಈ ಶಿಬಿರಕ್ಕೆ ಶ್ರೀ ಆರ್. ವೆಂಕಣ್ಣ, ಜಿಲ್ಲಾ ಕಾರ್ಯದರ್ಶಿ ಇವರು ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು. ಇವರಿಗೆ ಸಹಾಯಕರುಗಳಾಗಿ ಶ್ರೀ ನಾಗೇಶ ಆರ್. ಶಿವಪೂರ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು, ರಾಜ್ಯ ಪರಿಷತ್ ಸದಸ್ಯರಾದ ಶ್ರೀ ಡಿ. ಎಂ. ಸ್ಮಿತ್, ಹಗರಿಬೊಮ್ಮನಹಳ್ಳಿಯ ತಾಲ್ಲೂಕಿನ ಸ್ಥ. ಸಂ. ಕಾರ್ಯದರ್ಶಿಗಳಾದ ಶ್ರೀ ಎ. ಎಸ್. ಕಂಬಪ್ಪ, ಜಿಲ್ಲಾ ಸ್ಕೌಟರ್ ಪ್ರತಿನಿಧಿಯಾದ ಶ್ರೀ ಸೋಮನಗೌಡ, ಶ್ರೀ ಚಂದ್ರಶೇಖರ್ ಹಾಗೂ ಎಲ್ಲಾ ಸ್ಕೌಟರ್ ಗೈಡರ್‌ಗಳು ಈ ಸೇವಾ ಕಾರ್ಯದಲ್ಲಿ ಪಾಲ್ಗೊಂಡರು.

ಈ ಶಿಬಿರದ ಉದ್ಘಾಟನೆಯನ್ನು ದಿನಾಂಕ 24-8-96 ರಂದು ಶ್ರೀ ಟಿ. ಎಂ. ಪಂಚಾಕ್ಷರಯ್ಯ, ಭೂಮಾಲೀಕರು ಹಗರಿಬೊಮ್ಮನಹಳ್ಳಿ ಇವರು ನೆರವೇರಿಸಿದರು. ಸಭೆಯ ಅಧ್ಯಕ್ಷತೆಯನ್ನು ಚಿಂತ್ರಪಳ್ಳಿ ಗ್ರಾಮ ಪಂಚಾಯಿತಿಯ ಅಧ್ಯಕ್ಷೆಯಾದ ಶ್ರೀಮತಿ ದುರಗಮ್ಮನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಬಾಪೂಜಿ ಮಠದ ಪಾಟೀಲ ಆಗಮಿಸಿದ್ದರು.

ಈ ಸೇವಾ ಶಿಬಿರದ ಐದು ದಿನಗಳಲ್ಲಿ ಕೈಗೊಂಡ ಸೇವಾ ಕಾರ್ಯಗಳು :

1) ಗ್ರಾಮದ ಪ್ರತಿ ಮನೆಗೆ ಭೇಟಿ ನೀಡಿ ಜನರ ಜೀವನ ಮಟ್ಟ, ಅವರ ವೃತ್ತಿ, ವಾರ್ಷಿಕ ವರಮಾನ, ದೈಹಿಕ ದೌರ್ಬಲ್ಯಗಳು, ವೃದ್ಧರು, ದೇವದಾಸಿಯರು, ವಿಧವೆಯರುಗಳನ್ನು ಗುರುತಿಸಿ ಅವರಿಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳ ಬಗ್ಗೆ ಮಾಹಿತಿ ನೀಡಿ, ಅರ್ಹ ಫಲಾನುಭವಿಗಳಿಗೆ ಮಾಸಿಕ ಪಿಂಚಣಿಯನ್ನು ದೊರಕಿಸಿ ಕೊಡುವ ಅರ್ಜಿ ನಮೂನೆಗಳನ್ನು ತುಂಬಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಕೊಡಲಾಯಿತು.

2) ಎರಡನೆಯ ದಿನ ಬಳ್ಳಾರಿ ಹಾಗೂ ಹೊಸಪೇಟೆಯಿಂದ ಖ್ಯಾತ ವೈದ್ಯರುಗಳಾದ ಡಾ॥ ಯೋಗಾನಂದ ರೆಡ್ಡಿ, ಡಾ॥ ದಿವಾಕರ, ಡಾ॥ ರವಿಕಿರಣ, ಡಾ॥ ರಾಜಕುಮಾರ, ಡಾ॥ ಎಂ. ಆರ್. ಮುರಳಿ, ಡಾ॥ ಗುಗ್ರಿ ಸಿದ್ಧರಾಮೇಶ, ಡಾ॥ ಪ್ರೇಮಲತಾ ವಿನಾಯಕ, ಡಾ॥ ಕ್ಯಾಪ್ಟನ್ ಕೃಷ್ಣಮೂರ್ತಿ, ಡಾ॥ ಆರ್. ಎಂ. ಸೋಮನಾಥ ಇವರುಗಳು ಆಗಮಿಸಿ ಗ್ರಾಮದ 600 ಜನಸಂಖ್ಯೆಯಲ್ಲಿ 594 ಜನರನ್ನು ತಪಾಸಣೆ ಮಾಡಿದರು. 10,000 ರೂ.ಗಳ ಔಷಧಿಯನ್ನು ಉಚಿತವಾಗಿ ವಿತರಿಸಲಾಯಿತು.

3) ಮೂರನೆಯ ದಿನ ಗ್ರಾಮಸ್ಥರ ಹಾಗೂ ಅರಣ್ಯ ಇಲಾಖೆಯ ಸಹಕಾರದೊಂದಿಗೆ 500 ಮರಗಳನ್ನು ನೆಡಲಾಯಿತು.

4) ನಾಲ್ಕನೆಯ ದಿನ ವಲ್ಲಭಾಪುರ ಗ್ರಾಮದ ಯುವಕರನ್ನು ಸೇರಿಸಿಕೊಂಡು 150 ಮೀಟರ್ ಉದ್ದದ ಹೊಸ ರಸ್ತೆಯನ್ನು ನಿರ್ಮಾಣ ಮಾಡಲಾಯಿತು.

5) ಐದನೆಯ (ಕೊನೆಯ) ದಿನ ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಯಿತು. ಇದರ ನಂತರ ಸುಮಾರು 100 ಮೀಟರ್ ಉದ್ದದ ಚರಂಡಿಯ ಸ್ವಚ್ಛತಾ ಕಾರ್ಯಕ್ರಮವನ್ನು ಗ್ರಾಮ ಪಂಚಾಯಿತಿ ನೌಕರರ ಸಹಾಯದೊಂದಿಗೆ ಕೈಗೊಳ್ಳಲಾಯಿತು.

ಕೊನೆಯ ದಿನ ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ರಾಜ್ಯ ಕಾರ್ಯದರ್ಶಿಗಳಾದ ಪ್ರೊಫೆಸರ್ ಎಂ. ಸೂರ್ಯನಾರಾಯಣಪ್ಪನವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸ್ಕೌಟ್ ಮತ್ತು ಗೈಡ್‌ಗಳಿಗೆ ಪ್ರಮಾಣ ಪತ್ರವನ್ನು ವಿತರಿಸಿದರು. ಇವರ ಜೊತೆಗೆ ಆಗಮಿಸಿದ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಕೆ. ತಿಮ್ಮಪ್ಪನವರು ಸ್ಕೌಟ್ ಮತ್ತು ಗೈಡ್‌ಗಳಿಗೆ ಪ್ರಗತಿಪರ ತರಬೇತಿಯನ್ನು ವಿವರಿಸುತ್ತಾ, ಸರ್ಕಾರದಿಂದ ದೊರೆಯುವ ಸೌಲಭ್ಯಗಳನ್ನು ವಿವರಿಸಿದರು.

ಆ ಬಳಿಕ ಕನ್ನಡ ಸಂಸ್ಕೃತಿ ಇಲಾಖೆ, ಬಳ್ಳಾರಿ ಇವರು ಜಿಲ್ಲೆಯ ವಿವಿಧ ಭಾಗಗಳಿಂದ ಗ್ರಾಮೀಣ ಕಲಾವಿದರನ್ನು ಕರೆಯಿಸಿ, ಮಕ್ಕಳಿಗೆ ರಸದೌತಣ ಉಣಿಸಿದರು.

ಇವೆಲ್ಲವುಗಳ ಜೊತೆಗೆ ನಮ್ಮ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳಾದ ಬಿ. ಪಿ. ವ್ಯಾಯಾಮ, ಧ್ವಜ ವಂದನೆ, ಶಿಬಿರಾಗ್ನಿ ಕಾರ್ಯಕ್ರಮಗಳು ಜರುಗಿ ಪ್ರತಿದಿನವೂ ಗ್ರಾಮದ ಜನರನ್ನು ರಂಜಿಸಿದುವು.

## ಧಾರವಾಡ ಜಿಲ್ಲೆ

### ಜಿಲ್ಲಾ ಮಟ್ಟದ ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರ

ಧಾರವಾಡ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ದಿನಾಂಕ 19-7-96 ರಿಂದ 28-7-96ರ ವರೆಗೆ ಜಿಲ್ಲಾ ಮಟ್ಟದ ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರವು ನಡೆಯಿತು. ಜಿಲ್ಲೆಯ ವಿವಿಧ ತಾಲ್ಲೂಕುಗಳ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಂದ 64 ಶಿಕ್ಷಕಿಯರು ಭಾಗವಹಿಸಿದರು. ಶ್ರೀಮತಿ ಪ್ರಭಾ ಲೋಂಡೆ ಹಾಗೂ ಶ್ರೀಮತಿ ವನಜಾಕ್ಷಮ್ಮ ಇವರುಗಳು ನಾಯಕರುಗಳಾಗಿದ್ದರು. ಶ್ರೀಮತಿಯರುಗಳಾದ ಕುಸುಮಾ ಮಾಕರಿ, ಲಕ್ಷ್ಮಿ ಮಂಟೂರ, ಪಾರ್ವತಿ ಹಿರೇಗೌಡರ, ಬಿ. ಎಸ್. ಖಾನಾಪೂರ, ಎಸ್. ಸಿ. ಹಿರೇಮಠ ಇವರುಗಳು ಸಹಾಯಕರುಗಳಾಗಿ ಕಾರ್ಯ ನಿರ್ವಹಿಸಿದರು. ದಿನಾಂಕ 27-7-96 ರಂದು ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಕುಂದಗೋಳ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ. ಬಿ. ಮೇಗೇರಿಯವರು, ಧಾರವಾಡ ತಾಲ್ಲೂಕು ಸಹಾಯಕ ಶಿಕ್ಷಣಾಧಿಕಾರಿಗಳಾದ ಶ್ರೀ ಗಾಮನಗಟ್ಟಿಯವರು ಮುಖ್ಯ ಅತಿಥಿಗಳಾಗಿದ್ದರು. ಸರಕಾರಿ ಶಿಕ್ಷಕಿಯರ ತರಬೇತಿ ಸಂಸ್ಥೆಯ ಅಧೀಕ್ಷಕಿಯಾದ ಶ್ರೀಮತಿ ರಮಾ ಹೊಸಕೇರಿಯವರು ಅಧ್ಯಕ್ಷರಾಗಿ ಆಗಮಿಸಿದ್ದರು. ಅತಿಥಿಗಳು ಜಿಲ್ಲಾ ಸಂಸ್ಥೆಯ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಒಂದು ಅತ್ಯುತ್ತಮವಾದ ಸಂಘಟನೆಯೆಂದೂ, ಎಲ್ಲ ಶಾಲೆಗಳಲ್ಲಿ ಇದರ ದಳಗಳು ಕಡ್ಡಾಯವಾಗಿ ಇರಬೇಕೆಂದೂ, ಒತ್ತಿ ಹೇಳಿದರು.

### ಜಿಲ್ಲಾ ಮಟ್ಟದ ಗೈಡ್ ಮಕ್ಕಳಿಗಾಗಿ ಪದಕ ಸಿದ್ಧತಾ ಶಿಬಿರ

27-7-96 ರಿಂದ 31-7-96ರ ವರೆಗೆ ಧಾರವಾಡದಲ್ಲಿ ಗೈಡ್ ಮಕ್ಕಳಿಗಾಗಿ ಪದಕ ಸಿದ್ಧತಾ ಶಿಬಿರವನ್ನು ನಡೆಸಲಾಯಿತು. ವಿವಿಧ ತಾಲ್ಲೂಕುಗಳಿಂದ 70 ಮಕ್ಕಳು ಇದರಲ್ಲಿ ಭಾಗವಹಿಸಿ ಉನ್ನತ ತರಬೇತಿಯನ್ನು ಪಡೆದರು.

ದಿನಾಂಕ 30–7–96 ರಂದು ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ವಿದ್ಯಾರಣ್ಯ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರಾದ ಶ್ರೀಮತಿ ಶಾಲಿನಿ ಕುಲಕರ್ಣಿ ಇವರು ಮುಖ್ಯ ಅತಿಥಿಗಳಾಗಿದ್ದರು. ಮಕ್ಕಳು ಪ್ರಸ್ತುತಪಡಿಸಿದ ವಿವಿಧ ಚಟುವಟಿಕೆಗಳನ್ನು ವೀಕ್ಷಿಸಿದ ಮುಖ್ಯ ಅತಿಥಿಗಳು ಸ್ಕೌಟ್ ಮತ್ತು ಗೈಡ್ ಸಂಘಟನೆಯು ಎಲ್ಲ ಮಕ್ಕಳಿಗೆ ಒಂದು ಉಪಯುಕ್ತವಾದ ಸಂಘಟನೆಯಾಗಿದ್ದು ಇದರಲ್ಲಿ ಕಲಿಯುವ ಅನೇಕ ವಿಷಯಗಳು ಜೀವನದ ವಿವಿಧ ಪ್ರಸಂಗಗಳಲ್ಲಿ ಹೆಚ್ಚು ಉಪಯುಕ್ತವಾಗುವುದೇ ಅಲ್ಲದೆ ಮಕ್ಕಳ ಸ್ವಾವಲಂಬಿ ಗುಣವನ್ನೂ ಪರೋಪಕಾರೀ ಮನೋಭಾವನೆಯನ್ನೂ ಬೆಳೆಸುತ್ತದೆ ಎಂದು ಹೇಳಿದರು. ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಅನ್ನಪೂರ್ಣ ಕಡಕೋಳ ಇವರು ಅಧ್ಯಕ್ಷಭಾಷಣದಲ್ಲಿ ಜಿಲ್ಲಾ ಸಂಸ್ಥೆಯು ಮಕ್ಕಳಿಗಾಗಿ ವರ್ಷವಿಡೀ ಹಮ್ಮಿಕೊಂಡಿರುವ ಉಪಯುಕ್ತ ಚಟುವಟಿಕೆಗಳ ಬಗೆಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

**ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳ ಹಾಗೂ ವುಡ್‌ಬ್ಯಾಡ್ಜ್ ಶಿಕ್ಷಕರ ಸಮಾವೇಶ**

ದಿನಾಂಕ 30 ಹಾಗೂ 31 ಜುಲೈ 96 ರಂದು ಜಿಲ್ಲಾ ಸಂಸ್ಥೆಯ ಆವರಣದಲ್ಲಿ ತಾಲ್ಲೂಕು ಸಂಸ್ಥೆಗಳ ಕಾರ್ಯದರ್ಶಿಗಳು ಸಹ ಕಾರ್ಯದರ್ಶಿಗಳು ಮತ್ತು ವುಡ್‌ಬ್ಯಾಡ್ಜ್ ಪಡೆದ ಶಿಕ್ಷಕರುಗಳ ಸಮಾವೇಶವು ನಡೆಯಿತು. ಜಿಲ್ಲೆಯ ಎಲ್ಲ ತಾಲ್ಲೂಕುಗಳಿಂದ ಆಗಮಿಸಿದ ಕಾರ್ಯದರ್ಶಿ ಮತ್ತು ಸಹ ಕಾರ್ಯದರ್ಶಿಗಳು ಇದರಲ್ಲಿ ಭಾಗವಹಿಸಿ 96-97ನೇ ಸಾಲಿನ ಮಕ್ಕಳ ಚಟುವಟಿಕೆಗಳ ಬಗೆಗೆ ಚರ್ಚಿಸಿ ಇಡೀ ವರ್ಷದ ರೂಪರೇಷೆಗಳನ್ನು ಸಿದ್ಧಪಡಿಸಿದರು. ಶಿಕ್ಷಕರುಗಳ ವಿವಿಧ ತರಬೇತಿಗಳನ್ನು ನಿಗದಿಪಡಿಸಿಕೊಂಡರು.

**ಜಿಲ್ಲಾ ಸಂಸ್ಥೆಯ 77ನೇ ಮಹಾಮಂಡಳದ ವಾರ್ಷಿಕ ಸಭೆ**

ದಿನಾಂಕ 31-7-96 ರಂದು ಸಂಜೆ ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ ಜಿಲ್ಲಾಧಿಕಾರಿಗಳೂ ಆದ ಶ್ರೀ ಸಂಜೀವ ಕುಮಾರ ಇವರ ಅಧ್ಯಕ್ಷತೆಯಲ್ಲಿ 77ನೇ ವಾರ್ಷಿಕ ಸಭೆಯನ್ನು ನಡೆಸಲಾಯಿತು. ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಬಂದು ಹಾಜರಿದ್ದ ಪ್ರತಿನಿಧಿಗಳು ಸಕ್ರಿಯವಾಗಿ ಚರ್ಚೆಯಲ್ಲಿ ಭಾಗವಹಿಸಿದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಧಿಕಾರಿಗಳು ವರ್ಷವಿಡೀ ಜಿಲ್ಲಾ ಸಂಸ್ಥೆಯು ಮಕ್ಕಳಿಗಾಗಿ ಮತ್ತು ಶಿಕ್ಷಕರಿಗಾಗಿ ಹಮ್ಮಿಕೊಂಡಿರುವ ಚಟುವಟಿಕೆಗಳನ್ನು ಶ್ಲಾಘಿಸಿದರು. ತಮ್ಮ ಸಮಾರೋಪ ಭಾಷಣದಲ್ಲಿ, ತಾವು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸಾಧ್ಯವಿರುವ ಎಲ್ಲ ಪ್ರಕಾರದ ಸಹಾಯವನ್ನೂ ಒದಗಿಸುವುದಾಗಿ ಸಂತೋಷದಿಂದ ಆಶ್ವಾಸನೆ ನೀಡಿದರು.

## ಚಿತ್ರದುರ್ಗ ಜಿಲ್ಲೆ

31-7-96 ರಂದು ಜಿಲ್ಲಾ ಮಟ್ಟದ ಸ್ಕೌಟರ್ ಮತ್ತು ಗೈಡರ್‌ಗಳ ಪುನಶ್ಚೇತನಾ ಶಿಬಿರವು ನಡೆಯಿತು. ಸಹಾಯಕ ರಾಜ್ಯ ಆಯುಕ್ತರಾದ ಶ್ರೀ ಸಿ. ಆರ್. ಮಹ್ಮದ್ ಜಹಿರುದ್ದೀನ್‌ರವರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಆಯುಕ್ತ ಸ್ಕೌಟ್ಸ್ ಆದ ಶ್ರೀ ರಾಮಲಿಂಗ ಶೆಟ್ಟಿ ರವರೂ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಜಯಶ್ರೀ ಜಯಪ್ರಕಾಶ್ ರವರೂ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಹೇಮಂತಿನಿ ಪ್ರಕಾಶ್ ರವರೂ ಶಿಬಿರಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ರಾಜ್ಯ ಕೇಂದ್ರ ಸ್ಥಾನ ಆಯುಕ್ತರಾದ ಶ್ರೀ ಮಹ್ಮದ್ ವಾಸಿಲ್, ಎಲ್. ಟಿ. ರವರು ಶಿಬಿರ ನಾಯಕರಾಗಿದ್ದರು. ಶ್ರೀ ಚಂದ್ರ ಪ್ರಕಾಶ್ ಮತ್ತು ಶ್ರೀ ಮಂಜುನಾಥ್ ರವರು ಅಧ್ಯಾಪಕ ವರ್ಗದಲ್ಲಿದ್ದರು. ಚಿತ್ರದುರ್ಗದ ಶ್ರೀ ಚಂದ್ರಶೇಖರ್‌ರವರಿಗೂ ಹಿರಿಯೂರು ತಾ|| ನ ಶ್ರೀ ವೀರಾಚಾರ್ ಅವರಿಗೂ ವುಡ್ ಬ್ಯಾಡ್ಜ್ ಪ್ರದಾನ ಮಾಡಲಾಯಿತು.

**ಜಿಲ್ಲಾ ಸಂಸ್ಥೆಯ ಸರ್ವ ಸದಸ್ಯರ ಸಭೆ**

ದಿನಾಂಕ 7-7-96 ರಂದು ಚಿತ್ರದುರ್ಗ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ವಾರ್ಷಿಕ ಸರ್ವ ಸದಸ್ಯರ ಸಭೆಯು ಚಿತ್ರದುರ್ಗ ನಗರದ ಸ್ಕೌಟ್ ಭವನದಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ, ಡಿ.ವೈ.ಎಸ್.ಪಿ. ಶ್ರೀ ಹಲಗೇರಿ ಇವರು ಭಾಗವಹಿಸಿ ಮಾತನಾಡುತ್ತಿದ್ದರು.

"ಸ್ಕೌಟಿಂಗ್ ಮತ್ತು ಗೈಡಿಂಗ್" ಅಂತರ ರಾಷ್ಟ್ರೀಯ ಸೇವಾಸಂಸ್ಥೆ. ಇದು ನಮ್ಮ ದೇಶದಲ್ಲಿ ಬಹಳ ಕಾಲದಿಂದಲೂ ಮಾನವ ಕುಲಕೋಟಿಗೆ ತನ್ನ ಸಮಾಜ ಸೇವೆಯನ್ನು ಮುಂದುವರಿಸಿಕೊಂಡು ಬಂದಿದೆ. ತನ್ನ ನಿಸ್ವಾರ್ಥ ಸೇವೆಯನ್ನುಉಳಿಸಿ ಬೆಳೆಸಿಕೊಂಡು ಬಂದಿರುವ ಈ ಸಂಸ್ಥೆ ಜನತೆಗೆ ಒಂದು ಶ್ರೇಷ್ಠ ಕೊಡುಗೆಯಾಗಿದೆ" ಎಂದು ಹೇಳಿದರು.

ಅವರು ಮುಂದುವರೆದು "ಬೆಂಗಳೂರಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಆಗಾಗ್ಗೆ ಸಣ್ಣ ಸಣ್ಣ ಗುಂಪುಗಳಲ್ಲಿ ಬಂದು ವಾಹನ ನಿಯಂತ್ರಣದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಾರೆ. ಆಶ್ಚರ್ಯವೆಂದರೆ ಅದೇ ಸಂದರ್ಭದಲ್ಲಿ ಅವರು ಶಿಸ್ತನ್ನು ಮೈಗೂಡಿಸಿಕೊಳ್ಳುತ್ತಾರೆ. ಇವನ್ನು ನೋಡುವ ಜನರಲ್ಲೂ ಅವರಿಗೆ ಅರಿವಿಲ್ಲದೆಯೇ ಶಿಸ್ತು ಬೆಳೆಯಲು ಪ್ರಾರಂಭವಾಗಿರುತ್ತದೆ. ಎಲ್ಲಾ ಕಡೆಯಲ್ಲೂ ಅಶಿಸ್ತು ಇದೆ. ಸಮಾಜ ಸೇವೆಯ ಮುಖಾಂತರ ಮಕ್ಕಳಿಂದ ಜನರಲ್ಲಿ ಶಿಸ್ತನ್ನು ಮೂಡಿಸುವ ಕಾಲವೀಗ ಒದಗಿ ಬಂದಿದೆ, ಅದೂ ಸ್ಕೌಟ್ ಮಕ್ಕಳಿಂದ. ಇದು ಶುಭ ಸೂಚನೆ" ಎಂದು ಹೇಳಿದರು.

"ಎಲ್ಲಾ ಜಿಲ್ಲೆಗಳಲ್ಲಿರುವಂತೆ, ಈ ಜಿಲ್ಲೆಯ ಸಂಸ್ಥೆಯು ಒಳ್ಳೆಯ ಕಾರ್ಯಚಟುವಟಿಕೆಯನ್ನು ಹಮ್ಮಿಕೊಂಡಿದೆ. ಬೆಂಗಳೂರಿನಲ್ಲಿ ಅವಕಾಶ ನೀಡಿರುವಂತೆ ಇಲ್ಲಿಯ ಸ್ಕೌಟ್ ಮಕ್ಕಳಿಗೂ ವಾಹನ ಸಂಚಾರ ನಿಯಂತ್ರಣದಲ್ಲಿ ಪಾಲ್ಗೊಳ್ಳುವ ಅವಕಾಶವನ್ನು ಒದಗಿಸಲಾಗುವುದು. ಮಕ್ಕಳಿಗೆ ಈ ಆಯಾಮದಲ್ಲಿ ವ್ಯವಸ್ಥಿತ ತರಬೇತಿಯನ್ನು ನೀಡುವ ಆಲೋಚನೆ ಇದೆ. ಸರ್ವೇಸಾಮಾನ್ಯ ಪರಿಸ್ಥಿತಿ ಇದ್ದಾಗ ಮಾತ್ರ ಈ ಅವಕಾಶವನ್ನು ಮಕ್ಕಳಿಗೆ ಒದಗಿಸಲಾಗುವುದು" ಎಂದರು.

ಕೆಲವರಿಗೆ ರೋಡ್ ಸಿಗ್ನಲ್ ಗೊತ್ತಿರುವುದಿಲ್ಲ, ತಿಳಿದುಕೊಳ್ಳಬೇಕಾದ ಅವಶ್ಯಕತೆ ಇದೆ. ವಾಹನ ಚಾಲನೆ ಮಾಡುವುದು ನಾವು ಊಹಿಸಿದಷ್ಟು ಸುಲಭವಲ್ಲ, ಚೆನ್ನಾಗಿ ಕಲಿತ ನಂತರವೇ ವಾಹನಗಳನ್ನು ಓಡಿಸಬೇಕು. ಮಕ್ಕಳಿಗೆ ಸಮಯ ದೊರೆತಾಗ ಅವರ ಬಿಡುವಿನ ವೇಳೆಯು ವ್ಯರ್ಥವಾಗದಂತೆ ವಾಹನ ಸಂಚಾರ ನಿಯಂತ್ರಣದಲ್ಲಿ ತೊಡಗಿಸಿಕೊಳ್ಳಲಾಗುವುದು. ಇದರಿಂದ ಸಮಯವು ಸದುಪಯೋಗ ಆಗುತ್ತದೆ. ಇದೂ ಕೂಡ ಸಮಾಜ ಸೇವೆಯ ಒಂದು ಪ್ರಮುಖ ಭಾಗ ಎಂದು ಒತ್ತಿ ಹೇಳಿದರು.

ರಾಜ್ಯ ಸಹಾಯಕ ಆಯುಕ್ತರಾದ ಸಿ. ಆರ್. ಮಹಮದ್ ಜಹಿರುದ್ದೀನ್ ಅವರು ಇತ್ತೀಚೆಗೆ ದೈವಾಧೀನರಾದ ಡಾ॥ ಸಿ. ಡಿ. ಜತ್ತನ್ನ ಮತ್ತು ಶ್ರೀ ಶಂಕರ್ ಇವರು ಸಂಸ್ಥೆಯ ಬೆಳವಣಿಗೆಯಲ್ಲಿ ಹಗಲಿರುಳೂ ಶ್ರಮಿಸಿರುವ ಮೇರು ಪರ್ವತಗಳೆಂದು ನುಡಿದು ಅವರುಗಳ ಸೇವೆಯನ್ನು ಸ್ಮರಿಸಿದರು. ಸಭೆಯು ಮೃತರುಗಳ ಆತ್ಮಕ್ಕೆ ಶಾಂತಿಯನ್ನು ಕೋರಿ ಒಂದು ನಿಮಿಷದ ಮೌನವನ್ನು ಆಚರಿಸಿ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸಿತು.

ಸ್ಕೌಟ್ ಪ್ರಾರ್ಥನೆಯೊಡನೆ ಸಭೆಯು ಪ್ರಾರಂಭವಾಯಿತು. ನಗರದ ಅಡ್ವೋಕೇಟ್ ಮತ್ತು ಸಂಸ್ಥೆಯ ಸದಸ್ಯೆ ಶ್ರೀಮತಿ ಎಂ. ಪಾರ್ವತಿ ಇವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಕಾರ್ಯದರ್ಶಿಗಳಾದ ಚಂದ್ರಶೇಖರಯ್ಯನವರು 95-96ನೇ ಸಾಲಿನ ಲೆಕ್ಕಪತ್ರ ಮತ್ತು ಆಯವ್ಯಯ ಪತ್ರವನ್ನೂ, 96-97ನೇ ಸಾಲಿನ ವಾರ್ಷಿಕ ಕಾರ್ಯಯೋಜನೆಯನ್ನೂ ಮಂಡಿಸಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ರಾಮಲಿಂಗಶೆಟ್ಟರು 96-97ನೇ ಸಾಲಿನಲ್ಲಿ ಸ್ಕೌಟ್ ಚಟುವಟಿಕೆಯನ್ನು ತೀವ್ರಗೊಳಿಸುವ ಭರವಸೆ ನೀಡಿ ವಂದನಾರ್ಪಣೆ ಸಲ್ಲಿಸಿದರು.

## ಬೆಂಗಳೂರು ಉತ್ತರ ಜಿಲ್ಲೆ

24-7-96 ರಂದು ರಾಜ್ಯ ಕಛೇರಿಯ ಆವರಣದಲ್ಲಿ ಸಾಮಾನ್ಯ ಮಾಹಿತಿ ಶಿಬಿರವು ನಡೆಯಿತು. 35 ಅಭ್ಯರ್ಥಿಗಳು ಭಾಗವಹಿಸಿದ್ದರು. ರಾಜ್ಯ ತರಬೇತಿ ಆಯುಕ್ತರಾದ ಶ್ರೀ ನಾರಾಯಣ ಶೆಟ್ಟರು ಶಿಬಿರ ನಾಯಕರಾಗಿದ್ದರು. ಶ್ರೀಯುತರುಗಳಾದ ಎಂ. ಎ. ಚಲ್ಲಯ್ಯ, ವಿ. ಕುಲಕರ್ಣಿ ಮತ್ತು ರಾಂ ಸಿಂಗ್ ಇವರುಗಳೂ, ಶ್ರೀಮತಿಯರಾದ ವಿ. ಸುರಭಿ ಮತ್ತು ಜಾನಕಿ ವೇಣುಗೋಪಾಲ್ ಇವರುಗಳೂ ಸಹಾಯಕರಾಗಿದ್ದರು.



29-7-96 ರಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಬೆಂಗಳೂರು ಉತ್ತರ ಜಿಲ್ಲೆಯ ಆಶ್ರಯದಲ್ಲಿ ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ನಲ್ಲಿ ನಡೆದ ಸ್ಕೌಟ್ ಮಾಸ್ಟರುಗಳ ಮೂಲ ತರಬೇತಿ ಶಿಬಿರಕ್ಕೆ ಭೇಟಿ ನೀಡಿದರು. ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಚಂದ್ರಶೇಖರ್ ಅವರನ್ನೂ ಚಿತ್ರದಲ್ಲಿ ಕಾಣಬಹುದು.

27-7-96 ರಿಂದ 5-8-96 ರವರೆಗೆ ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ನಲ್ಲಿ ಕಬ್ ಮಾಸ್ಟರುಗಳು, ಫ್ಲಾಕ್ ಲೀಡರುಗಳು ಮತ್ತು ಗೈಡ್ ಕ್ಯಾಪ್ಟನ್‌ಗಳು ಹಾಗೂ ಸ್ಕೌಟ್ ಮಾಸ್ಟರುಗಳಿಗಾಗಿ ಮೂಲ ಶಿಕ್ಷಣ ಶಿಬಿರಗಳು ನಡೆದವು. ಶ್ರೀಮತಿ ವಿ. ಸುರಭಿ, ಶ್ರೀಮತಿ ರೇವತಿ, ಶ್ರೀಮತಿ ಕೆ. ಸಿ. ಲೀಲಾ ಮತ್ತು ಶ್ರೀ ಕೆ. ಧ್ರುವರಾವ್ ಇವರುಗಳು ಕ್ರಮವಾಗಿ ಈ ಶಿಬಿರಗಳ ನಾಯಕರುಗಳಾಗಿದ್ದರು. ಒಟ್ಟು 86 ಉಪಾಧ್ಯಾಯ/ಉಪಾಧ್ಯಾಯಿನಿಯರುಗಳು ಶಿಕ್ಷಣ ಪಡೆದರು.

29-7-96 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಷಣ್ಮುಖಪ್ಪನವರು, ಶಿಬಿರಕ್ಕೆ ಭೇಟಿ ನೀಡಿ ಅಭ್ಯರ್ಥಿಗಳನ್ನುದ್ದೇಶಿಸಿ ಮಾತನಾಡಿದರು.



ಬೆಂಗಳೂರು ಉತ್ತರ ಜಿಲ್ಲೆ, ಹೆಬ್ಬಾಳ ಸ್ಥಳೀಯ ಸಂಸ್ಥೆಯವರು ಮರಿಗಳಿಗಾಗಿ ನಡೆಸಿದ ಪದಕ ಕಮ್ಮಟ ಶಿಬಿರದಲ್ಲಿ ಮರಿಗಳು ಗಂಟುಗಳನ್ನು ಕಲಿಯುತ್ತಿರುವುದು.

4-8-96 ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಕಾರ್ಯದರ್ಶಿಗಳಾದ ಪ್ರೊ|| ಎಂ. ಸೂರ್ಯ ನಾರಾಯಣಪ್ಪನವರು ಮುಖ್ಯ ಅತಿಥಿಗಳಾಗಿಯೂ, ರಾಜ್ಯ ಆಯುಕ್ತೆ (ಗೈಡ್ಸ್) ಶ್ರೀಮತಿ ಲಲಿತಾ ಕೃಷ್ಣಸ್ವಾಮಿಯವರು ಗೌರವ ಅತಿಥಿಯಾಗಿಯೂ ಆಗಮಿಸಿದ್ದರು. ಜಿಲ್ಲಾ ಸಂಸ್ಥೆಯ ಅಧ್ಯಕ್ಷ ಪದ್ಮಶ್ರೀ ಆರ್. ಎಂ. ಬಿ. ಆರಾಧ್ಯ ಅವರು ಅಧ್ಯಕ್ಷತೆ ವಹಿಸಿದ್ದರು

ಹೆಬ್ಬಾಳ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ 10-8-96 ಮತ್ತು 11-8-96 ದಿನಗಳಂದು ಮರಿಗಳು ಮತ್ತು ಬುಲ್‌ಬುಲ್‌ಗಳಿಗಾಗಿ ಪದಕ ಕಮ್ಮಟ ಶಿಬಿರಗಳನ್ನು ನಡೆಸಿದರು. 115 ಮರಿಗಳೂ, ಬುಲ್‌ಬುಲ್‌ಗಳೂ ಭಾಗ ವಹಿಸಿದ್ದರು. ಮರಿಗಳ ವಿಭಾಗಕ್ಕೆ ಶ್ರೀಮತಿ ವಿ. ಸುರಭಿರವರೂ, ಬುಲ್‌ಬುಲ್ ವಿಭಾಗಕ್ಕೆ ಶ್ರೀಮತಿ ರೇವತಿರವರೂ ನಾಯಕರುಗಳಾಗಿದ್ದರು.

ಮುಕ್ತಾಯ ಸಮಾರಂಭದಲ್ಲಿ ಆದರ್ಶ ವಿದ್ಯಾಲಯದ ಆಡಳಿತಾಧಿಕಾರಿ ಶ್ರೀಮತಿ ರಾಧಾ ರಾಮಸ್ವಾಮಿ ಅಯ್ಯಂಗಾರ್, ಮುಖ್ಯ ಅತಿಥಿಗಳಾಗಿಯೂ, ವಿಂಗ್ ಕಮ್ಯಾಂಡರ್ ರಾಮಪ್ರಸನ್ನ ಮತ್ತು ಸೈನ್ಯ ಸೇವೆಯ ಹಿರಿಯ ವಿಜ್ಞಾನಾಧಿಕಾರಿ ಶ್ರೀ ಗೋಪಾಲ್‌ರವರುಗಳು ಗೌರವ ಅತಿಥಿಗಳಾಗಿದ್ದರು. ಜಿಲ್ಲಾ ತರಬೇತಿ ಆಯುಕ್ತ ಶ್ರೀ ಪಿಚ್ಚುಪಿಳ್ಳೆರವರು ಅಭ್ಯರ್ಥಿಗಳನ್ನುದ್ದೇಶಿಸಿ ಮಾತನಾಡಿದರು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ

ಹೊಸಕೋಟೆ ತಾಲ್ಲೂಕು ಸೂಲಿಬೆಲೆಯ ವಿವೇಕಾನಂದ ಪ್ರೌಢಶಾಲೆಯ ಆವರಣದಲ್ಲಿ 15–8–96 ರಂದು ಸ್ವಾತಂತ್ರ್ಯ ದಿನಾಚರಣೆಯನ್ನು ವಿಜೃಂಭಣೆಯಿಂದ ನಡೆಸಲಾಯಿತು. ಸ್ಕೌಟ್ ಗೈಡ್‌ಗಳಿಂದ ನಡೆದ ಪ್ರಾರ್ಥನೆ, ಧ್ವಜವಂದನೆ ಮತ್ತು ಪಥಚಲನೆ ಕಾರ್ಯಕ್ರಮಗಳು ಆಕರ್ಷಣೀಯವಾಗಿದ್ದುವು. ಊರಿನ ಪ್ರಮುಖರು, ಸಂಸ್ಥೆಯ ಪದಾಧಿಕಾರಿಗಳೂ ಉಪಸ್ಥಿತರಿದ್ದರು.

24-8-96 ರಂದು ಹೊಸಕೋಟೆ ನಗರದಲ್ಲಿ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ, 30 ಶಿಕ್ಷಕರು ನೆರೆದಿದ್ದ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವು ನಡೆಯಿತು. ಶ್ರೀ ಕೆ. ಎಸ್. ಶಿವಕುಮಾರ್ ಮತ್ತು ಶ್ರೀ ಭೋಂಸ್ಲೆರವರು ಸಿಬ್ಬಂದಿ ವರ್ಗದಲ್ಲಿದ್ದರು.

## ಶಿವಮೊಗ್ಗ ಜಿಲ್ಲೆ

4, 5–8–96 ದಿನಗಳಂದು, ಜಿಲ್ಲಾ ಮಟ್ಟದ ಹಿಮಾಲಯ ವುಡ್‌ಬ್ಯಾಡ್ಜ್ ಧಾರಕರ ಸಮಾವೇಶವು ಜಿಲ್ಲಾ ಸ್ಕೌಟ್ ಭವನದಲ್ಲಿ ನಡೆಯಿತು. 30 ಮಂದಿ ವುಡ್‌ಬ್ಯಾಡ್ಜ್ ಧಾರಕರು ಭಾಗವಹಿಸಿದ್ದರು. 4-8-96 ರಂದು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಗಿರಿಮಾಜಿಯವರು ಸಮಾವೇಶವನ್ನು ಉದ್ಘಾಟಿಸಿದರು. ಶಿಕ್ಷಣ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರು, ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶಾಲಾ ತನಿಖಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರು ಆಹ್ವಾನಿತರಾಗಿ ಹಾಜರಿದ್ದರು. ಇದು ಸಂಸ್ಥೆಗೆ ಒದಗಬಹುದಾದ ಪ್ರೋತ್ಸಾಹಕ್ಕೆ ಪ್ರೇರಕವಾಗಿದ್ದಿತು. ಮುಕ್ತಾಯ ಸಮಾರಂಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಟಿ. ವಿ. ನಾರಾಯಣಶಾಸ್ತ್ರಿ ಅಧ್ಯಕ್ಷತೆ ವಹಿಸಿದ್ದರು. ಶಿಕ್ಷಣಾಧಿಕಾರಿ ಶ್ರೀ ಕುಮಾರ್ ಮುಖ್ಯ ಅತಿಥಿಗಳಾಗಿದ್ದರು. ಜಿಲ್ಲಾ ತರಬೇತಿ ಆಯುಕ್ತ ಶ್ರೀ ರಾಂಸಿಂಗ್ ವರದಿಯನ್ನೊಪ್ಪಿಸಿದರು.

23 ರಿಂದ 27-7-96ರ ವರೆಗೆ ಜಿಲ್ಲಾ ಮಟ್ಟದ ಪದಕ ಕಮ್ಮಟ ಶಿಬಿರವು ನಡೆಯಿತು. ಶಿವಮೊಗ್ಗ ಜಿಲ್ಲಾ ಮಟ್ಟದ ಪದಕ ಕಮ್ಮಟ ಶಿಬಿರವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕ ಶ್ರೀ ವಾಸುದೇವ್‌ರವರು




ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ, ಸ್ಕೌಟ್ ಮತ್ತು ಗೈಡ್‌ಗಳ ಪದಕ ಸಿದ್ಧತಾ ಶಿಬಿರವನ್ನು
ಸಾ॥ ಶಿ॥ ಇಲಾಖಾ ಉಪ ನಿರ್ದೇಶಕ ಶ್ರೀ ವಾಸುದೇವ್ ಉದ್ಘಾಟಿಸಿದರು.

23-7-96 ರಂದು ಉದ್ಘಾಟಿಸಿದರು. ಅಧಿಕ ಸಂಖ್ಯೆಯಲ್ಲಿ ಸ್ಕೌಟುಗಳು ಭಾಗವಹಿಸಿದ್ದರು. ಶಿಬಿರದ ಅಂಗವಾಗಿ ಸಮಾಜ ಸೇವಾ ಕಾರ್ಯವನ್ನು ಹಮ್ಮಿಕೊಳ್ಳಲಾಗಿದ್ದಿತು.

## ಬೆಳಗಾಂ ಜಿಲ್ಲೆ

19-7-96 ರಂದು ಕುಷ್ಠರೋಗ ಮುಕ್ತ ಶಾಲಾ ಯೋಜನೆಯನ್ನು ಡಾ॥ ಎ. ಎಸ್. ಕಾಕಡಿ, ಎಂ.ಬಿ.ಬಿ.ಎಸ್., ಸಿವಿಲ್ ಆಸ್ಪತ್ರೆ, ಬೆಳಗಾವಿ ಇವರು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯು ಹೊರ ತಂದಿರುವ ಕುಷ್ಠರೋಗ ನಿವಾರಣೆಯ 99 ಅಂಶಗಳ ಕನ್ನಡ ಅನುವಾದವನ್ನು ಬಿಡುಗಡೆ ಮಾಡಲಾಯಿತು. ಶಾಲೆಯ ಪ್ರಧಾನ ಗುರುಗಳಿಗೆ ಹಾಗೂ ಸ್ಕೌಟರ್ ಗೈಡರ್‌ಗಳಿಗೆ ಕುಷ್ಠರೋಗದ ಬಗ್ಗೆ ಸ್ಲೈಡುಗಳನ್ನು ತೋರಿಸಿ ಅದರ ಬಗ್ಗೆ ವಿವರಣೆ ನೀಡಲಾಯಿತು. ಸಭೆಯಲ್ಲಿ ಶ್ರೀ ಬಡಿಗೇರ, ಬೆಳಗಾವಿ ತಾ॥ ಶಾಲಾ ತನಿಖಾಧಿಕಾರಿಗಳು ಸಹ ಕುಷ್ಠರೋಗದ ಬಗ್ಗೆ ತಮ್ಮ ತಾಲ್ಲೂಕಿನಲ್ಲಿ ಎಲ್ಲಾ ಶಾಲೆಗಳಿಗೆ ಮಾಹಿತಿ ನೀಡಿ ಸಹಕರಿಸಲು ಸಭೆಯಲ್ಲಿ ತಿಳಿಸಿದರು. ಮೊದಲಿಗೆ ಜಿಲ್ಲಾ ಕಮೀಷನರ್ (ಗೈಡ್ಸ್) ಶ್ರೀಮತಿ ಮೀನಾಕ್ಷಿ ರಾಜಶೇಖರರವರು ಸ್ವಾಗತಿಸಿದರು. ಶ್ರೀ ಟಿ. ಎ. ಮಂಜುನಾಥಾಚಾರ್ ಎ.ಎಸ್.ಓ.ಸಿ. (ಎಸ್.) ರವರು ಕುಷ್ಠರೋಗದ ಮುಕ್ತ ಶಾಲಾ ಯೋಜನೆಯ ಬಗ್ಗೆ ತಿಳಿಸಿದರು.

ಖಾನಾಪುರ ತಾ॥ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ 13–8–96 ರಂದು ಸಾಮಾನ್ಯ ಮಾಹಿತಿ ಶಿಬಿರವು ನಡೆಯಿತು.

ನೇತಾಜಿ ರೋವರ್ ಮತ್ತು ಒಲೀವ್ ರೇಂಜರ್ ಮುಕ್ತ ದಳಗಳ ರೋವರ್, ರೇಂಜರ್‌ಗಳಿಗೆ, ಸ್ಥಳೀಯ ವಿಜ್ಞಾನ ಕೇಂದ್ರದ ಮುಖ್ಯರಾದ ಶ್ರೀ ಸರೋಡ್‌ರವರ ನಾಯಕತ್ವದಲ್ಲಿ "ಹ್ಯಾಂ" ಶಿಬಿರವನ್ನು 22-8-96 ರಂದು ಪ್ರಾರಂಭಿಸಲಾಯಿತು. ಸ॥ ರಾಜ್ಯ ಆಯುಕ್ತ ಶ್ರೀ ವಿ. ಎನ್. ಜೋಷಿ ಮತ್ತು ಶ್ರೀಮತಿ ಮೀನಾಕ್ಷಿ ರಾಜಶೇಖರ್ ಜಿಲ್ಲಾ ಆಯುಕ್ತೆ (ಗೈಡ್) ಇವರು ಈ ಶಿಬಿರವನ್ನು ಸಂಘಟಿಸಿರುತ್ತಾರೆ.



19-7-96 ರಂದು ಬೆಳಗಾಂನ ಜಿಲ್ಲಾ ಸ್ಕೌಟ್ ಗೈಡ್ ಭವನದಲ್ಲಿ, ಸಿವಿಲ್ ಆಸ್ಪತ್ರೆಯ ಡಾ|| ಎ. ಎಸ್. ಕಾಕಡಿಯವರು "ಕುಷ್ಠ ರೋಗ ಮುಕ್ತ ಶಾಲಾ ಯೋಜನೆ"ಯನ್ನು ಉದ್ಘಾಟಿಸಿದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಮೀನಾಕ್ಷಿ ರಾಜಶೇಖರ್ ಅವರನ್ನೂ, ಬೆಳಗಾಂ ತಾ|| ಸ್ಥಳೀಯ ಸಂಸ್ಥೆ ಅಧ್ಯಕ್ಷ ಶ್ರೀ ಬಡಿಗೇರ್‌ರವರನ್ನೂ ಸ|| ರಾಜ್ಯ ಸಂ|| ಆಯುಕ್ತ ಶ್ರೀ ಮಂಜುನಾಥ್‌ರವರನ್ನೂ ಚಿತ್ರದಲ್ಲಿ ಕಾಣಬಹುದು.

ಒಲೀವ್ ದಳದ ರೇಂಜರ್ ಕು|| ವಿಜಯ ಶಿವಪೂಜಿ ಇವರಿಗೆ ತಮ್ಮ ಗೈಡ್ ಶಿಕ್ಷಣದ ಹಿನ್ನಲೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರು, ಎಂ.ಎ. (ಸೈಕಾಲಜಿ) ಸ್ನಾತಕೋತ್ತರ ಅಧ್ಯಯನಕ್ಕೆ ಅವಕಾಶ ನೀಡಿರುತ್ತಾರೆ ಎಂದು ತಿಳಿಸಲು ಹರ್ಷಿಸುತ್ತೇವೆ.

ಸರ್ಕಾರಿ ಶಿಕ್ಷಣ ವಿದ್ಯಾಲಯದಲ್ಲಿ, ರೋವರ್ ಮತ್ತು ರೇಂಜರ್‌ಗಳಾಗಿ ಕಂಪ್ಯೂಟರ್ ತರಗತಿಗಳನ್ನು 29-8-96 ರಂದು ಪ್ರಾರಂಭಿಸಲಾಗಿದೆ. ಶ್ರೀಯುತರುಗಳಾದ ಶ್ರೀ ಎಸ್. ಕೆ. ಅಮ್‌ಟೆ ಮತ್ತು ಬಿ. ಟಿ. ದೇಸಾಯಿ ಇವರುಗಳು ಶಿಬಿರದ ಶಿಕ್ಷಕ ವರ್ಗದಲ್ಲಿರುತ್ತಾರೆ.

## ತುಮಕೂರು ಜಿಲ್ಲೆ

1-9-96 ರಂದು ಬೆಳಗ್ಗೆ ಹಬ್ಬದ ಸಡಗರದಿಂದ ತುಮಕೂರು ನಗರದ ಕಂಠೀರವ ಸ್ಕೌಟ್ ಭವನದ ಪ್ರಾಂಗಣದಲ್ಲಿ 300ಕ್ಕೂ ಹೆಚ್ಚು ಸ್ಕೌಟ್ ಗೈಡ್‌ಗಳೂ, ಸಂಸ್ಥೆಯ ನಾಯಕರುಗಳೂ ನೆರೆದಿದ್ದರು. ಜಿಲ್ಲಾ ಆಯುಕ್ತ ಸ್ಕೌಟ್ಸ್ ಶ್ರೀ ವೇಣು.ಗೋಪಾಲಕೃಷ್ಣರವರೂ, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳೂ, ನಗರದ ಅನೇಕ ಗಣ್ಯ ವ್ಯಕ್ತಿಗಳೂ ಉಪಸ್ಥಿತರಿದ್ದರು.

ತುಮಕೂರಿನ ಶಾಸಕರಾದ ಶ್ರೀ ಎಸ್. ಶಿವಣ್ಣನವರು ಅಂದು ಬೆಳಗ್ಗೆ 10-30 ಗಂಟೆಗೆ "ಸದ್ಭಾವನಾ ದಿನ"ವನ್ನು ಉದ್ಘಾಟಿಸಿ ಆ ದಿನದ ವಿಶೇಷತೆಯನ್ನು ವಿವರಿಸಿದರು. 1986ರ ಬೆಂಗಳೂರಿನ ರಾಷ್ಟ್ರೀಯ ಜಾಂಬೋರಿಯ ವೇಳೆಯಲ್ಲಿ ಕೇಂದ್ರ ಸರ್ಕಾರದ ವತಿಯಿಂದ ಉದಾರ ಅನುದಾನ ನೀಡಿ ಸಂಸ್ಥೆಯ ಪುರೋಭಿವೃದ್ಧಿಗೆ ನಾಂದಿ ಹಾಡಿದ ನೆಚ್ಚಿನ ನಾಯಕ ದಿವಂಗತ ಪ್ರಧಾನಿ ರಾಜೀವ್‌ಗಾಂಧಿಯವರನ್ನು ಸ್ಮರಿಸಲಾಯಿತು.

ಆ ಬಳಿಕ ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ, ತುಮಕೂರು ಜಿಲ್ಲಾಧಿಕಾರಿಗಳೂ ಆದ ಶ್ರೀ ಐ. ಎಂ. ವಿಠ್ಠಲ ಮೂರ್ತಿ, ಐ.ಎ.ಎಸ್.ರವರು, ಬರುವ ಜನವರಿಯ ಮೊದಲ ವಾರದಲ್ಲಿ ನಡೆಸಲು ಉದ್ದೇಶಿಸಿರುವ 23ನೆಯ ಕರ್ನಾಟಕ ರಾಜ್ಯ ಜಾಂಬೋರೆಟ್‌ನ ಕಛೇರಿಯನ್ನು ಅಧಿಕೃತವಾಗಿ ಉದ್ಘಾಟಿಸಿದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ರಾಜ್ಯ ಪುರಸ್ಕಾರ್ ಪ್ರಶಸ್ತಿ ವಿಜೇತರಿಗೆ ಪ್ರಮಾಣ ಪತ್ರ ವಿತರಣೆ ಮಾಡಿ ಮಕ್ಕಳನ್ನು ಹರಸಿದರು.

ಅಧ್ಯಕ್ಷತೆ ವಹಿಸಿದ್ದ ಕೈಗಾರಿಕೋದ್ಯಮಿಗಳಾದ ಶ್ರೀ ಎಸ್. ಆರ್. ಜಗದೀಶ್‌ರವರು ಸಭೆಯನ್ನುದ್ದೇಶಿಸಿ ಮಾತನಾಡಿದರು.

ಸದ್ಭಾವನಾ ದಿವಸದ ಅಂಗವಾಗಿ "ಸರ್ವಧರ್ಮ ಪ್ರಾರ್ಥನೆ"ಯನ್ನು ನಡೆಸಲಾಯಿತು.

ಈ ಮುಂಚೆ ಜಿಲ್ಲಾ ಆಯುಕ್ತೆ (ಗೈಡ್ಸ್) ಶ್ರೀಮತಿ ಬಿಸಿನೀರ್‌ರವರು ಸಭಿಕರನ್ನು ಸ್ವಾಗತಿಸಿದರು, ಅಂತ್ಯದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಆಶಾ ಪ್ರಸನ್ನಕುಮಾರ್‌ರವರು ವಂದನಾರ್ಪಣೆ ಸಲ್ಲಿಸಿದರು.

## ದಕ್ಷಿಣ ಕನ್ನಡ ಜಿಲ್ಲೆ

ಕುಷ್ಠರೋಗ ಮುಕ್ತ ಶಾಲಾ ಯೋಜನೆಯನ್ವಯ 9-7-96 ರಿಂದ 26-7-96ರ ವರೆಗೆ 15 ಶಾಲೆಗಳಲ್ಲಿ ತಪಾಸಣೆ ನಡೆಸಲಾಯಿತು. ಒಟ್ಟು 15 ಶಾಲೆಗಳ 2,331 ಬಾಲಕರನ್ನೂ, 2,103 ಬಾಲಕಿಯರನ್ನೂ ಪರ್ಯವೇಕ್ಷಿಸಲಾಯಿತು. ಕೋಡಿಕಲ್ ಮತ್ತು ಶೇಡಿಗುಡ್ಡೆ ಶಾಲೆಗಳಲ್ಲಿ ಮಾತ್ರ ಒಬ್ಬ ಬಾಲಕ ಮತ್ತು ಇಬ್ಬರು ಬಾಲಕಿಯರನ್ನು ಗುರುತಿಸಲಾಯಿತು. ಪರ್ಯವೇಕ್ಷಣಾ ಕಾರ್ಯದಲ್ಲಿ ಒಟ್ಟು 30 ಸ್ಕೌಟ್‌ಗಳೂ, 24 ಗೈಡ್‌ಗಳೂ ಭಾಗವಹಿಸಿದ್ದರು.

ಈ ಬಗ್ಗೆ ಪೂರ್ವಭಾವಿಯಾಗಿ ಮಾಹಿತಿ ಶಿಕ್ಷಣ ಕಾರ್ಯಕ್ರಮಗಳನ್ನು 19-7-96 ರಲ್ಲಿ ಉಡುಪಿಯಲ್ಲೂ, 20-7-86 ರಂದು ಬೆಳ್ತಂಗಡಿಯಲ್ಲೂ ನಡೆಸಲಾಯಿತು. 9 ಸ್ಕೌಟರುಗಳೂ, ಗೈಡರುಗಳೂ, 66 ಸ್ಕೌಟ್ ಮತ್ತು ಗೈಡ್‌ಗಳೂ ಭಾಗವಹಿಸಿದ್ದರು.

ಬೆಳ್ತಂಗಡಿಯಲ್ಲಿ ನಡೆದ ಶಿಕ್ಷಣ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಬಸವೇಗೌಡರು ಉದ್ಘಾಟಿಸಿದರು. ಮಾಹಿತಿಯನ್ನು ಸ್ಲೈಡ್‌ಗಳ ಮತ್ತು ಪ್ರಾತ್ಯಕ್ಷಿಕೆಗಳ ಮೂಲಕ ಡಾ|| ಎಂ. ವಿ. ಭಟ್ ನೀಡಿದರು. ಶ್ರೀ ಭವಾನಿ ಶಂಕರ್ ಸಹಾಯಕರಾಗಿದ್ದರು.

ಜಿಲ್ಲಾ ತರಬೇತಿ ಆಯುಕ್ತ ಶ್ರೀ ವಾಲ್ಟರ್ ಪಿಂಟೋ ಮತ್ತು ಯೋಜನಾಧಿಕಾರಿ ಕುಮಾರಿ ಜೂಲಿಯಾನಾ ಲಸ್ರಾದೋ ಸಭೆಯಲ್ಲಿ ಉಪಸ್ಥಿತರಿದ್ದರು. ಶ್ರೀ ರಮೇಶಾಚಾರ್, ಎ.ಎಲ್.ಟಿ. (ಕಬ್ಸ್) ಪ್ರಾರಂಭದಲ್ಲಿ ಸ್ವಾಗತಿಸಿ, ಅಂತ್ಯದಲ್ಲಿ ವಂದಿಸಿದರು.

## ಕೋಲಾರ ಉತ್ತರ ಜಿಲ್ಲೆ

15-8-96 ರಂದು ಜಿಲ್ಲಾ ಸ್ಕೌಟ್ ಗೈಡ್ ಭವನದ ಆವರಣದಲ್ಲಿ ಟೌನ್ ರ್‍ಯಾಲಿ ನಡೆಯಿತು. ಒಟ್ಟು 300 ಜನ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್‌ಗಳು ಭಾಗವಹಿಸಿದ್ದರು. ಜಿಲ್ಲಾ ಆಯುಕ್ತರಾದ ಶ್ರೀ ಕೆ. ವಿ. ಶಂಕರಪ್ಪನವರು ವಂದನೆ ಸ್ವೀಕರಿಸಿದರು. ಜಿಲ್ಲಾ ಕಾರ್ಯದರ್ಶಿ ಡಬ್ಲ್ಯು. ಇ. ಎಸ್. ಕುಮಾರ್ ಸ್ವಾಗತಿಸಿದರು. ಜಿಲ್ಲಾ ಆಯುಕ್ತರು ಸಿಹಿ ಹಂಚಿದ ಬಳಿಕ, ಮಕ್ಕಳು ನಗರದ ಮುಖ್ಯ ಬೀದಿಗಳಲ್ಲಿ ಚಲಿಸಿ, ವಿಶ್ವೇಶ್ವರಯ್ಯ ಕ್ರೀಡಾಂಗಣ ವನ್ನು ಸೇರಿದರು. ಅಲ್ಲಿ ನಡೆದ ಅಧಿಕೃತ ಸರ್ಕಾರಿ ಸಮಾರಂಭದಲ್ಲಿ ಭಾಗವಹಿಸಿದರು. ಸಮಾಜ ಕಲ್ಯಾಣ ಇಲಾಖೆಯ ಸಚಿವರು ವಂದನಾಸ್ವೀಕಾರ ಮಾಡಿದರು. ಶ್ರೀಯುತರುಗಳಾದ ರಘುನಾಥಾಚಾರ್, ಸುರೇಶ್ ಮತ್ತು ಬಾಲ ಸುಬ್ರಹ್ಮಣ್ಯಂ ಇವರುಗಳು ಸಹಾಯಕ ಮೇಲ್ವಿಚಾರಕರಾಗಿದ್ದರು. ಶ್ರೀ ರಮೇಶಾಚಾರ್ ಸಹ ಹಾಜರಿದ್ದು ಸಮಾರಂಭದ ಯಶಸ್ಸಿಗೆ ಕಾರಣರಾದರು.

## ದಾವಣಗೆರೆ ಜಿಲ್ಲೆ

ದಾವಣಗೆರೆ ಉತ್ತರ ವಲಯ ಸ್ಥಳೀಯ ಸಂಸ್ಥೆಯ ಕಾರ್ಯಕಾರೀ ಸಮಿತಿಯು 13-8-96 ರಂದು ಸಭೆ ಸೇರಿ ಶ್ರೀ ಮಹಲಿಂಗಪ್ಪನವರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆಮಾಡಿತು. ಸ್ಥಳೀಯ ಸಂಸ್ಥೆಗೆ ನಗರಸಭೆಯ ಮೂಲಕ ಸೂಕ್ತ ನಿವೇಶನವನ್ನು ಪಡೆದು ಕಟ್ಟಡ ಕಟ್ಟುವ ಬಗ್ಗೆ ಮುಂದುವರೆಯಲು ಮಾಜಿ ಸ॥ ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಬಿ. ಜಿ. ಸಿದ್ದಪ್ಪನವರಿಗೆ ಜವಾಬ್ದಾರಿ ವಹಿಸಲಾಯಿತು. ಬ್ಯಾಂಡ್‌ಸೆಟ್, ಸಾಮಾನ್ಯ ಮಾಹಿತಿ ಶಿಬಿರ ಹಾಗೂ ಸ್ಕೌಟರ್, ಗೈಡರ್‌ಗಳ ಸಮಾವೇಶದ ಬಗ್ಗೆ ಸಹ ಚರ್ಚಿಸಿ, ಕಾರ್ಯಪ್ರವೃತ್ತರಾಗಲು ತೀರ್ಮಾನಿಸಲಾಯಿತು.

## ಚಿಕ್ಕಮಗಳೂರು ಜಿಲ್ಲೆ

ಜಿಲ್ಲಾ ಮಟ್ಟದ ಸ್ಕೌಟರ್ ಮತ್ತು ಗೈಡರ್‌ಗಳ ಸಮ್ಮೇಳನ ಹಾಗೂ ಪುನಃಶ್ಚೇತನಾ ಶಿಬಿರವು 31-8-96 ಮತ್ತು 1-9-96 ದಿನಗಳಂದು ನಡೆಯಿತು. ಜಿಲ್ಲಾದ್ಯಂತ ಒಟ್ಟು 30 ಸ್ಕೌಟರ್ ಮತ್ತು ಗೈಡರ್‌ಗಳು ಭಾಗವಹಿಸಿದರು. ಶ್ರೀ ಎಂ. ಎಸ್. ಷಡಾಕ್ಷರಿ ಜಿಲ್ಲಾ ತರಬೇತಿ ಆಯುಕ್ತ (ಸ್ಕೌಟ್) ಶಿಬಿರ ನಾಯಕರಾಗಿದ್ದರು. ಲಿಲ್ಲಿ ಡಿಕೋನ, ಜಿಲ್ಲಾ ಸಂಘಟನಾ ಆಯುಕ್ತೆ (ಗೈಡ್) ಮತ್ತು ಎ.ಎಸ್.ಒ.ಸಿ. (ಎಸ್.) ಶ್ರೀ ಎಲ್. ಟಿ. ಲೋಕೇಶ್ ಮತ್ತು ಎಸ್. ಜಿ. ವಿ. ಶ್ರೀ ಜಯಣ್ಣರವರುಗಳು ಸಹಾಯಕರಾಗಿದ್ದರು.

31-8-96 ರಂದು ಚಿಕ್ಕಮಗಳೂರು ಜಿಲ್ಲಾಧಿಕಾರಿಗಳೂ, ಜಿಲ್ಲಾ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಐ. ಎಸ್. ಎನ್. ಪ್ರಸಾದ್‌ರವರು ಶಿಬಿರವನ್ನು ಉದ್ಘಾಟಿಸಿದರು. 1-9-96 ರಂದು ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಸಂಘಟನಾ ಆಯುಕ್ತ ಶ್ರೀ ಕೆ. ತಿಮ್ಮಪ್ಪನವರು ಪ್ರಮಾಣ ಪತ್ರ ವಿತರಿಸಿದರು. ಪ್ರಾದೇಶಿಕ ಸಂಘಟನಾ ಆಯುಕ್ತ ಶ್ರೀ ರಾಜಕುಮಾರ್ ಕೌಶಿಕ್‌ರವರು ಶಿಬಿರಕ್ಕೆ ಭೇಟಿ ನೀಡಿ ಮಾರ್ಗದರ್ಶನ ನೀಡಿದರು. ಜಿಲ್ಲಾ ಆಯುಕ್ತರುಗಳಾದ ಶ್ರೀ ಬಿ. ಆರ್. ಸಚ್ಚಿದಾನಂದ ಮತ್ತು ಶ್ರೀಮತಿ ಸಿ. ಎಂ. ಪಿಂಟೋ ಇವರುಗಳು ಆಗಾಗ್ಗೆ ಸಂದರ್ಶಿಸಿ ಶಿಬಿರದ ಯಶಸ್ಸಿಗೆ ಕಾರಣರಾದರು. ಶಿಬಿರಾವಧಿಯಲ್ಲಿ ಸ್ಕೌಟ್ ಕೌಶಲ್ಯಗಳ ಬಗ್ಗೆ ಪುನಃಶ್ಚೇತನ ನೀಡಲಾಯಿತು.

---

## ಗೈಡ್ ಕ್ಯಾಪ್ಟನ್‌ಗಳ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಶಿಬಿರ

24-8-96 ರಿಂದ 2-9-96ರ ವರೆಗೆ ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್‌ನಲ್ಲಿ ಗೈಡ್ ಕ್ಯಾಪ್ಟನ್‌ಗಳ ಹಿಮಾಲಯ ವುಡ್‌ಬ್ಯಾಡ್ಜ್ ತರಬೇತಿ ಶಿಬಿರವು ನಡೆಯಿತು. ರಾಜ್ಯದ 11 ಜಿಲ್ಲೆಗಳಿಂದ 42 ಗೈಡರ್‌ಗಳು ಶಿಬಿರದಲ್ಲಿ ಭಾಗವಹಿಸಿದರು ಶ್ರೀಮತಿ ರವಿ ವೆಸ್ಲಿ. ಎಲ್.ಟಿ. (ಗೈಡ್ಸ್) ರವರು ಶಿಬಿರ ನಾಯಿಕೆಯಾಗಿದ್ದರು. ಇವರಿಗೆ ಸಹಾಯಕರಾಗಿ ಶ್ರೀಮತಿ ಗೀತಾ ನಟರಾಜನ್, ಎ.ಯಲ್.ಟಿ. (ಗೈ) ಮತ್ತು ಶ್ರೀಮತಿ ಪ್ರಭಾ ಲೋಂಡೆ, ಎ.ಎಲ್.ಟಿ. (ಗೈ) ಇವರುಗಳು ಆಗಮಿಸಿದ್ದರು. 24-8-96 ರಂದು ಶಿಬಿರದ ಸೃಜನಶೀಲ ಕಾರ್ಯಕ್ರಮದ ಅಂಗವಾಗಿ "ಮಾನಸ" ಎಂಬ ಹೆಸರಿನ ಹಸ್ತ ಲಿಖಿತ ಪತ್ರಿಕೆಯನ್ನು ಹೊರತರಲಾಯಿತು. 1-9-96ರಂದು ನಡೆದ ಮುಕ್ತಾಯ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ಕರ್ನಾಟಕ ಯುವಜನಸೇವಾ ಹಾಗೂ ಕ್ರೀಡಾ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಆರ್. ಯಲ್. ಪಾಟೀಲರು, ರಾಜ್ಯ ಆಯುಕ್ತೆ ಶ್ರೀಮತಿ ಲಲಿತಾ ಕೃಷ್ಣಸ್ವಾಮಿಯವರು, ರಾಜ್ಯ ಕಾರ್ಯದರ್ಶಿ ಪ್ರೊ॥ ಎಂ. ಸೂರ್ಯನಾರಾಯಣಪ್ಪನವರು ಮತ್ತು ಜಂಟಿ ಕಾರ್ಯದರ್ಶಿ ಮೇಜರ್ ಟಿ. ಕೆ. ನಾಗಾಂಬಾಳ್‌ರವರು ಭಾಗವಹಿಸಿದ್ದರು.

# THOUGHTS TO PONDER

## ANYWAY

People are unreasonble, illogical and self centered
LOVE THEM ANYWAY.

If you do good, people will accuse you of selfish ulterior motives
DO GOOD ANYWAY.

If you are successful you can win false friends and true Enemies
SUCCEED ANYWAY.

The good you do To-Day will be forgotton tomorrow
DO GOOD ANYWAY.

Honesty and frankness makes you vulnerable
BE HONEST AND FRANK ANYWAY.

People favour underdogs but follow only top Dogs
FIGHT FOR SOME UNDERDOGS ANYWAY.

What you spent years building may be destroyed overnight
BUILD ANYWAY.

People really need help, but may attack you if you help them
HELP PEOPLE ANYWAY.

Give the world the best you have and you will get kicked in the teeth
GIVE THE WORLD THE BEST YOU HAVE GOT.

---

## THINK

If you think you are beaten, you are,
If you think you dare not, you don't,
If you like to win, but you think You can't
It is almost certain you won't.

If you think you will lose, you're lost.
For out of the world we find, success
Begins with a fellow's will, It's all in
The state of mind.

If you think you are outclassed, You are
You've got to think high to raise,
You've got to be sure of yourself
Before You can ever win a prize

Life's battles don't always go to the Stranger or faster man but sooner or later THE MAN WHO WINS IS THE MAN WHO THINKS HE CAN !

# ಬರಲಿರುವ ಪ್ರಮುಖ ಸಮಾವೇಶಗಳು

## ರಾಜ್ಯಮಟ್ಟದ ಕಬ್ ಬುಲ್‌ಬುಲ್ ಉತ್ಸವ, ಶಿವಮೊಗ್ಗ

ಇದೇ ನವೆಂಬರ್ ಕೊನೆಯ ವಾರದಲ್ಲಿ ಐತಿಹಾಸಿಕ ಹಾಗೂ ನಿಸರ್ಗ ರಮಣೀಯ ಶಿವಮೊಗ್ಗ ನಗರದಲ್ಲಿ ರಾಜ್ಯಮಟ್ಟದ ಕಬ್ ಬುಲ್‌ಬುಲ್ ಉತ್ಸವವು ನಡೆಯಲಿದೆ. ಈ ಸಂದರ್ಭದಲ್ಲಿ 22-9-96 ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಗೈಡ್ ಭವನದಲ್ಲಿ ಜಿಲ್ಲಾ ಹಾಗೂ ರಾಜ್ಯ ಪದಾಧಿಕಾರಿಗಳ ಪೂರ್ವಭಾವೀ ಸಭೆಯು ಜರುಗಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಅಧ್ಯಕ್ಷತೆ ವಹಿಸಿದ್ದರು.

## 23ನೇ ರಾಜ್ಯಮಟ್ಟದ ಸ್ಕೌಟ್, ಗೈಡ್ ಜಾಂಬೊರೇಟ್, ತುಮಕೂರು

ಬರುವ 1997 ಜನವರಿ ಮೊದಲ ವಾರದಲ್ಲಿ ರಾಜ್ಯದ ಐತಿಹಾಸಿಕ ಮತ್ತು ಸುಂದರವಾದ ತುಮಕೂರು ನಗರದ ಮಹಾತ್ಮಾ ಗಾಂಧೀ ಕ್ರೀಡಾಂಗಣದಲ್ಲಿ 23ನೆಯ ಕರ್ನಾಟಕ ರಾಜ್ಯ ಸ್ಕೌಟ್ ಗೈಡ್ ಜಾಂಬೋರೇಟ್ ನಡೆಯಲಿದೆ. 1-9 96 ರಂದು ಜಾಂಬೋರೇಟ್ ಕಛೇರಿಯು ಅಧಿಕೃತವಾಗಿ ಪ್ರಾರಂಭಿಸಲ್ಪಟ್ಟಿತು. ಇದೇ 23-9-96 ರಂದು ಜಿಲ್ಲಾಧಿಕಾರಿಗಳಾದ ಶ್ರೀ ಐ. ಎಂ. ವಿಠಲಮೂರ್ತಿಯವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖೆಗಳ ಹಾಗೂ ಸ್ಕೌಟ್ ಸಂಸ್ಥೆಯ ಪದಾಧಿಕಾರಿಗಳ ಪೂರ್ವಭಾವೀ ಸಭೆ ಸೇರಿ ಆಗಬೇಕಾದ ಸಿದ್ಧತೆಗಳ ಬಗ್ಗೆ ಚರ್ಚಿಸಿತು.

## 13ನೇ ರಾಷ್ಟ್ರೀಯ ಜಾಂಬೋರೀ

ಬರುವ 1998ರ ಜನವರಿ 4 ರಿಂದ 9ರ ವರೆಗೆ ಒರಿಸ್ಸಾ ರಾಜ್ಯದ ಖುರ್ದಾದಲ್ಲಿ ನಡೆಯಲಿದೆ.

ಒರಿಸ್ಸಾ ರಾಜ್ಯವು ಭಾರತದ ಪೂರ್ವ ತೀರದಲ್ಲಿದೆ. ರಾಜ್ಯದ ರಾಜಧಾನಿ ಭುವನೇಶ್ವರದಿಂದ 25 ಕಿ.ಮೀ. ದೂರದ ಖುರ್ದಾ ರೋಡ್ ರೈಲ್ವೇ ಜಂಕ್ಷನ್‌ನಿಂದ 6 ಕಿ.ಮೀ. ದೂರದಲ್ಲಿ ರಾಷ್ಟ್ರೀಯ ಹೆದ್ದಾರಿಯ ಬದಿಯಲ್ಲಿ ಜಾಂಬೋರಿ ನಗರವು ಮೇಲೇಳಲಿದೆ.

ನಂದನ್‌ಕಾನನ್ ವನ್ಯ ಪ್ರಾಣಿಗಳ ರಕ್ಷಿತ ಪ್ರದೇಶ, ಭುವನೇಶ್ವರದ ಗಗನ ಚುಂಬಿ ದೇವಾಲಯಗಳು, ಪ್ರಸಿದ್ಧ ಪುರಿ ಜಗನ್ನಾಥ ಯಾತ್ರಾಸ್ಥಳ, ಕೋನಾರ್ಕದ ಸೂರ್ಯ ದೇವಾಲಯ, ಒಳನಾಡಿನ ಚಿಲ್ಕಾ ಸರೋವರ ಹಾಗೂ ಪಕ್ಷಿಧಾಮ, ಬೌದ್ಧ ವಿಹಾರಗಳು ಮುಂತಾದ ಅನೇಕ ಸ್ಥಳಗಳು ನಿಮ್ಮನ್ನು ಕೈಬೀಸಿ ಕರೆಯುತ್ತಿವೆ.

ಜಾಂಬೋರೀಯಲ್ಲಿನ ಅಂತರ ಜನಾಂಗ, ಭಾಷೆ, ಸಂಸ್ಕೃತಿಗಳ ಸಂಗಮದಲ್ಲಿ ಒಂದಾಗುವ, ಸಾವಿರಾರು ಯುವ ಜನರೊಡನೆ ಕಲೆತು ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸುವ, ಭಾರತದ ಯುವಜನರ ಈ ಮಹಾಪೂರದಲ್ಲಿ ಒಂದಾಗಿ ಐಕ್ಯತೆಯನ್ನು ಸಾರುವ, ಹಿಂದಿಲ್ಲದ, ಮುಂದೊದಗದ ವಿಶೇಷ ಅನುಭವದ ಆನಂದವನ್ನು ಪಡೆಯಲು ಇಂದಿನಿಂದಲೇ ತಯಾರಾಗಿ. ಒರಿಸ್ಸಾ ರಾಜ್ಯವು ನಿಮ್ಮನ್ನು ಸ್ವಾಗತಿಸಲು ಕಾದಿದೆ.

# ವಿಶ್ವಮಟ್ಟದ ಸ್ಕೌಟ್ ವಾರ್ತೆಗಳು

ನಾರ್ವೆ ದೇಶದ ರಾಜಧಾನಿ ಓಸ್ಲೋನಲ್ಲಿ 1996 ರ ಜುಲೈ 8 ರಿಂದ 12 ರ ವರೆಗೆ 34 ನೆಯ ವಿಶ್ವ ಸ್ಕೌಟ್ ಸಮಾವೇಶವು ನಡೆಯಿತು. "ಇನ್ನೂ ವಿಶಾಲವಾಗಿ ನೋಡು" ಎಂಬುದು ಸಮಾವೇಶದ ಕರೆಯಾಗಿದ್ದಿತು. 1939ರಲ್ಲಿ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್‌ರವರು ಕೆನ್ಯಾ ಪರ್ವತವನ್ನು ನೋಡಿ ಉದ್ಗರಿಸಿದ "ವಿಶಾಲವಾಗಿ ನೋಡು ; ಇನ್ನೂ ಎತ್ತರದಲ್ಲಿ ನೋಡು ; ಇನ್ನೂ ಮುಂದೆ ನೋಡು, ಮಾರ್ಗವು ಗೋಚರಿಸುತ್ತದೆ" ಎಂಬ ಮಾತನ್ನು ಉಲ್ಲೇಖಿಸಿ, 21ನೆಯ ಶತಮಾನದ ಉದಯ ಕಾಲದಲ್ಲಿ, ನಮ್ಮ ಚಳುವಳಿಯು, ಸಂಸ್ಥಾಪಕರ ಈ ಮಾತನ್ನು ಕಾರ್ಯ ರೂಪಕ್ಕೆ ತರುವ, ಎಂದಿಗಿಂತಲೂ ಹೆಚ್ಚಿನ ಅವಶ್ಯಕತೆಯನ್ನು ಸಮಾವೇಶವು ದೃಢಪಡಿಸಿತು. ಅಂದಿನ ಸವಾಲು ಗಳನ್ನೆದುರಿಸಲು ಇಂದೇ ತಯಾರಾಗಬೇಕೆಂದು ಅಭಿಪ್ರಾಯಪಟ್ಟಿತು.

32ನೆಯ ಪ್ಯಾರಿಸ್‌ನ ಹಾಗೂ 33ನೆಯ ಬ್ಯಾಂಕಾಕ್‌ನ ಸಮಾವೇಶಗಳಲ್ಲಿ ರೂಪಿಸಿದ ಸಂಚಾಲನ ತಂತ್ರ ಗಳನ್ನು ಈ ಸಭೆಯು ದೃಢಪಡಿಸುವುದಾಗಿಯೂ, ಆ ತಂತ್ರಗಳನ್ನು ವಿಶ್ವದ ಇಡೀ ವ್ಯವಸ್ಥೆಯು ಕಾರ್ಯರೂಪಕ್ಕೆ ತರಬೇಕೆಂದೂ ಕೋರಿತು. "ಏತಕ್ಕಾಗಿ ಸ್ಕೌಟಿಂಗ್ ? ಯಾರಿಗಾಗಿ ಸ್ಕೌಟಿಂಗ್ ?" ಎಂಬ ಸವಾಲುಗಳನ್ನು ಕೂಲಂಕಷವಾಗಿ ಪರಿಶೀಲಿಸಿತು.

1993–96 ರ ಅವಧಿಯಲ್ಲಿ ವಿಶ್ವ ಸಮಾವೇಶಕ್ಕೆ ಸದಸ್ಯತ್ವ ಪಡೆದ ಲಾಟ್ವಿಯ, ಸ್ಲಾವೆನಿಯ, ಮಂಗೋಲಿಯ ಯುಗೋಸ್ಲಾವಿಯ, ಪೋಲೆಂಡ್, ನೈಜರ್, ಎಸ್ಟೋನಿಯ ಮತ್ತು ಜೆಕ್ ಗಣರಾಜ್ಯಗಳನ್ನು ಸ್ವಾಗತಿಸಿತು. ಈ ದೇಶಗಳು ವೋಸಂನ್ನು ಸೇರಿದುದರಿಂದ, ವೋಸಂನಲ್ಲಿ 142 ಸದಸ್ಯ ರಾಷ್ಟ್ರಗಳಾದಂತಾಯಿತು.

**ನಮ್ಮ ರಾಷ್ಟ್ರೀಯ ಆಯುಕ್ತರಿಗೆ ಸಿಂಗಪೂರ್ ಸ್ಕೌಟ್ ಸಂಸ್ಥೆಯಿಂದ ಸಂದ ಗೌರವ**

ನಮ್ಮ ರಾಷ್ಟ್ರೀಯ ಆಯುಕ್ತರಾದ ಶ್ರೀ ಲಲಿತ ಮೋಹನ ಜೈನ್‌ರವರನ್ನು ಸಿಂಗಪೂರ್ ಸ್ಕೌಟ್ ಸಂಸ್ಥೆಯವರು ತಮ್ಮ ಸಂಸ್ಥೆಯ ಅತ್ಯುಚ್ಛ ಪ್ರಶಸ್ತಿಯಾದ "ವಿಶಿಷ್ಠ ಸೇವಾ ಪ್ರಶಸ್ತಿ"ಯನ್ನು ನೀಡಿ ಗೌರವಿಸಿರುತ್ತಾರೆ. 4-7-96 ರಂದು ಸಿಂಗಪೂರ್ ಗಣರಾಜ್ಯದ ಅಧ್ಯಕ್ಷರಾದ ಶ್ರೀ ಆಂಗ್ ಟೆಂಗ್ ಚೋಂಗ್‌ರವರು ಈ ಪ್ರಶಸ್ತಿಯನ್ನು ಪ್ರದಾನ ಮಾಡಿದರು.

**10ನೆಯ ವಿಶ್ವರೋವರ್ ಮೂಟ್, ರಾನ್ಸ್‌ಬರ್ಗ್, ಸ್ವೀಡನ್**

ಸ್ವೀಡನ್ನಿನ ರಾನ್ಸ್‌ಬರ್ಗ್‌ನಲ್ಲಿ 15 ರಿಂದ 25-7-1996 ರ ವರೆಗೆ ನಡೆದ 10ನೆಯ ವಿಶ್ವರೋವರ್ ಮೂಟ್ ನಲ್ಲಿ, ನಮ್ಮ ರಾಷ್ಟ್ರಕಛೇರಿಯ, ಈಶಾನ್ಯ ಪ್ರಾದೇಶಿಕ ಸಂಘಟನಾಧಿಕಾರಿಗಳಾದ ಶ್ರೀ ಆರ್. ಕೃಷ್ಣಸ್ವಾಮಿಯವರು, ಅಂತರರಾಷ್ಟ್ರೀಯ ಸಿಬ್ಬಂದಿ ವರ್ಗದ ಸದಸ್ಯರಾಗಿ ಭಾಗವಹಿಸಿದರಲ್ಲದೆ "ಕುಷ್ಠರೋಗ ನಿರ್ಮೂಲನಾ ಕಾರ್ಯಕ್ರಮ"ದ ಬಗ್ಗೆ ಯುವ ವೇದಿಕೆಯನ್ನು ಸಂಘಟಿಸಿದರು.

## ವಿಶ್ವಮಟ್ಟದಲ್ಲಿ ಮುಂಬರುವ ಸ್ಕೌಟ್ ಸಮಾರಂಭಗಳು

**19ನೆಯ ವಿಶ್ವ ಸ್ಕೌಟ್ ಜಾಂಬೋರೀ**

19ನೆಯ ವಿಶ್ವಸ್ಕೌಟ್ ಜಾಂಬೋರೀಯು 27-12-98 ರಿಂದ 6-1-99ರ ವರೆಗೆ ದಕ್ಷಿಣ ಅಮೇರಿಕಾ ಖಂಡದ ಚಿಲಿ ರಾಷ್ಟ್ರದಲ್ಲಿ ನಡೆಯುವುದು. "ಜೊತೆಗೂಡಿ ಶಾಂತಿಯನ್ನು ಸ್ಥಾಪಿಸುವುದು" ಜಾಂಬೋರೀಯ ಪ್ರಧಾನ ವಿಷಯ (ಥೀಂ) ಆಗಿದೆ. ಜಾಂಬೋರಿಗಾಗಿ ಈಗಾಗಲೇ ಶಿಬಿರವನ್ನು ಸಿದ್ಧಪಡಿಸಲಾಗುತ್ತಿದೆ. ಸಂಸ್ಥೆಯ "ಆಧ್ಯಾತ್ಮಿಕ ನೀತಿ"ಯನ್ನು ಜಾಂಬೋರೀಯ ಸಮಾರಂಭಗಳಲ್ಲಿ ಅಳವಡಿಸಿಕೊಳ್ಳುವ ಬಗ್ಗೆ ಚರ್ಚೆಗಳು ಸಾಗುತ್ತಿವೆ. ಜಾಂಬೋರಿ ಪ್ರದೇಶದಲ್ಲಿ ನೆಲೆಗೊಳ್ಳಲಿರುವ "ಖಗೋಳ ವಿಕಾಸ ಗ್ರಾಮ"ದ ಬಗ್ಗೆ ಸಿದ್ಧತೆಗಳು ಭರದಿಂದ ಸಾಗುತ್ತಿವೆ.

## 20ನೆಯ ವಿಶ್ವಸ್ಕೌಟ್ ಜಾಂಬೋರಿ

ಥಾಯ್‌ಲ್ಯಾಂಡ್‌ನ ರಾಷ್ಟ್ರೀಯ ಸ್ಕೌಟ್ ಸಂಘಟನೆಯು, ಆ ರಾಷ್ಟ್ರದ ಚೋನ್‌ಬೂರಿ ಪ್ರಾಂತ್ಯದ ಸಟ್ಟಾಹಿಪ್‌ನಲ್ಲಿ 20ನೆಯ ವಿಶ್ವಸ್ಕೌಟ್ ಜಾಂಬೋರಿಯನ್ನು ನಡೆಸಲು ತೀರ್ಮಾನಿಸಿ, ವಿಶ್ವಸ್ಕೌಟ್ ಸಂಸ್ಥೆಗೆ ಆಹ್ವಾನಿಸಿದೆ. ಓಸ್ಲೋ ಸಮಾವೇಶದಲ್ಲಿ ಈ ಆಹ್ವಾನಕ್ಕೆ ಮನ್ನಣೆ ದೊರೆಯಿತೆಂದು ಸುದ್ದಿ.

## 35ನೆಯ ವಿಶ್ವಸ್ಕೌಟ್ ಸಮಾವೇಶ ಮತ್ತು 7ನೆಯ ವಿಶ್ವಸ್ಕೌಟ್ ಯುವ ವೇದಿಕೆ

35ನೆಯ ವಿಶ್ವಸ್ಕೌಟ್ ಸಮಾವೇಶ ಹಾಗೂ 7ನೆಯ ವಿಶ್ವಸ್ಕೌಟ್ ಯುವ ವೇದಿಕೆಗಳನ್ನು 1999 ರ ಜನವರಿ 12 ರಿಂದ 22ರ ವರೆಗೆ ದಕ್ಷಿಣ ಆಫ್ರಿಕಾದ ಕೇಪ್‌ಟೌನ್‌ನಲ್ಲಿ ನಡೆಸಲು ಉದ್ದೇಶಿಸಲಾಗಿದೆ.

("ವರ್ಲ್ಡ್ ಸ್ಕೌಟಿಂಗ್"ನ ವಾರ್ತಾ ಪತ್ರಿಕೆಯ ಜುಲೈ 1996 ರ ಸಂಚಿಕೆ,
28ನೆಯ ಸಂಪುಟದಿಂದ ಉದ್ಧೃತವಾಗಿದೆ.)

---

## ' ಸ್ಕೌ ಟಿಂ ಗ್ ಪ ರಿ ಚ ಯ '

### ಪುಸ್ತಕದ ಬಗ್ಗೆ ಸಂಸ್ಥೆಯ ಹಿತೈಷಿಗಳೊಬ್ಬರ ಸ್ಪಂದನೆ

ಇಂದು ನಮ್ಮ ಯುವಕ, ಯುವತಿಯರು ಅನೇಕ ಆಧುನಿಕ ದುಶ್ಚಟಗಳ ಪ್ರಭಾವದಿಂದ, ನಮ್ಮ ಪುರಾತನ ಸಂಸ್ಕೃತಿಯನ್ನು ಬದಿಗೊತ್ತಿ, ಸ್ವಾರ್ಥ, ಹಿಂಸೆ, ದ್ವೇಷ, ಭಯೋತ್ಪಾದಕತೆ, ದೌರ್ಜನ್ಯ, ಅಶ್ಲೀಲತೆಗಳಿಗೆ ಬಲಿಯಾಗಿದ್ದಾರೆ. ಇದೊಂದು ದೊಡ್ಡ ಸಾಂಕ್ರಾಮಿಕ ಪಿಡುಗಾಗಿ ನಮ್ಮ ಇಂದಿನ ಜನಾಂಗದಲ್ಲಿ ಹರಡುತ್ತಿದೆ. ಇದನ್ನು ತಡೆಯಲು ಒಂದು ಬಲಶಾಲಿಯಾದ ಕಾರ್ಯಕ್ರಮದ ಅವಶ್ಯಕತೆಯಿದೆ. ಆ ಕಾರ್ಯಕ್ರಮವನ್ನು ಅವರ ಅರಿವಿಗೆ ಬರದಂತೆ ಮಧು ರೂಪವಾಗಿ ಉಣಿಸಬೇಕಾಗಿದೆ. ಈ ದಿಶೆಯಲ್ಲಿ ಸ್ಕೌಟ್ ಸಂಸ್ಥೆಯ ಕಾರ್ಯಕ್ರಮಗಳು ಅತಿ ಉತ್ತಮವಾದ ಸಾಧನವಾಗಿದೆಯೆಂದು ನನ್ನ ಅನಿಸಿಕೆ.

ನನ್ನ ಮಿತ್ರರಾದ ಶ್ರೀ ರಾ. ಚಂದ್ರಶೇಖರನ್‌ರವರು ಬರೆದಿರುವ "ಸ್ಕೌಟಿಂಗ್ ಪರಿಚಯ"ವೆಂಬ ಕಿರು ಹೊತ್ತಿಗೆಯನ್ನು ಓದಿ ನನಗೆ ಈ ಸಂಸ್ಥೆಯ ಆದರ್ಶ, ಗುರಿ ಮತ್ತು ಸಾಧನೆಗಾಗಿ ಅಳವಡಿಸಿಕೊಂಡಿರುವ ವೈವಿಧ್ಯಮಯವಾದ ಆಟಗಳು, ಬೋಧನೆ, ಹೊರಾಂಗಣ ಕಾರ್ಯಕ್ರಮಗಳು ಸಮಾಜದ ಸಹಬಾಳ್ವೆಗೆ ಅಗತ್ಯವಾದ ನಮ್ಮ ಸಂಸ್ಕೃತಿಯ ಅರಿವು ಮತ್ತು ಇನ್ನೂ ಅನೇಕ ಕ್ರಿಯಾತ್ಮಕವಾದ ವಿವಿಧ ಪ್ರಗತಿಪರ ಕಾರ್ಯಕ್ರಮಗಳ ಪರಿಚಯವಾಯಿತು.

ಈ ಕೈಪಿಡಿಯಲ್ಲಿ ಅಡಕವಾಗಿರುವ ಅನೇಕ ದೈಹಿಕ, ಮಾನಸಿಕ, ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಯುವಕರ ಸರ್ವತೋಮುಖ ಪ್ರಗತಿಗೆ ಪೂರಕವಾಗಿವೆ.

ಈ ಸಂದರ್ಭದಲ್ಲಿ ನನ್ನದೊಂದು ಚಿಂತನೆ. ಇಂತಹ ಪ್ರಕಟಣೆಗಳು ಸ್ಕೌಟ್ ಶಿಬಿರಗಳ ಉಪಯೋಗಕ್ಕೆ ಮಾತ್ರ ಸೀಮಿತವಾಗದೆ ಜನ ಸಾಮಾನ್ಯರಿಗೂ ತಿಳಿಯುವಂತೆ ಪ್ರಚಾರವಾದರೆ ನಮ್ಮ ಸಮಾಜದ ಅನೇಕ ಕುಂದು ಕೊರತೆಗಳು ಸುಧಾರಿಸುವುದರಲ್ಲಿ ಸಂದೇಹವಿಲ್ಲ. ಇದನ್ನು ಸಾರ್ವಜನಿಕ ಮಾಧ್ಯಮಗಳ ಮೂಲಕ ಪ್ರಚಾರ ಮಾಡಲು ನಮ್ಮ ಪತ್ರಿಕೋದ್ಯಮಿಗಳು ಮತ್ತು ಘನ ಸರ್ಕಾರದವರು ಆಸಕ್ತಿ ವಹಿಸಿದರೆ ಮಾತ್ರ ಇದರ ಪೂರ್ಣ ಫಲವು ನಮ್ಮ ಸಮಾಜಕ್ಕೆ ದೊರಕಬಲ್ಲದು. ಈ ದಿಶೆಯಲ್ಲಿ ಸ್ಕೌಟ್ ಸಂಸ್ಥೆಯ ಈ ಕಿರು ಹೊತ್ತಿಗೆಯು ಅತಿ ಅಮೂಲ್ಯವಾದ ಕಾಣಿಕೆಯಾಗಿದೆ.

—ಡಿ. ಎನ್. ಕೃಷ್ಣಮೂರ್ತಿ

(ಶ್ರೀ ಡಿ. ಎನ್. ಕೃಷ್ಣಮೂರ್ತಿಯವರು ಬೆಂಗಳೂರು ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಲಿ.,ನ ನಿವೃತ್ತ ವಿಕ್ರಯ ಅಧಿಕಾರಿಗಳು. ಎಂಬತ್ತರ ಹರೆಯದ ಇವರು ಆಧ್ಯಾತ್ಮಿಕ ಚಿಂತನೆಯ ಬಗ್ಗೆ ತೊಡಗಿಸಿಕೊಂಡಿದ್ದರೂ ಯುವ ಕಾರ್ಯಕ್ರಮಗಳ ಬಗ್ಗೆ ಆಸಕ್ತಿಯುಳ್ಳವರು, ಸ್ಕೌಟ್ ಸಂಸ್ಥೆಯ ಹಿತೈಷಿಗಳು).

ನೆನಪಿನಂಗಳದಿಂದ :

# ನಾನು ಕಂಡ ಚೀಫ್ ಸ್ಕೌಟ್ ಕಮೀಷನರು

ನ್ಯಾಯಮೂರ್ತಿ ಕೆ. ಶಂಕರನಾರಾಯಣರಾಯರು

1941–42ರ ಸಾಲಿನಲ್ಲಿ ಈಗಿನ ಸ್ಕೌಟ್ ಹೆಡ್‌ಕ್ವಾರ್ಟರ್ಸಿನ ಕೆಳಭಾಗದ, ಪಶ್ಚಿಮದ ಕೊನೆಯಲ್ಲಿರುವ, ಕೋಣೆಯಲ್ಲಿ ಶ್ರೀ ಶಂಕರನಾರಾಯಣರಾಯರನ್ನು ಸತ್ಕರಿಸಲು ಒಂದು ಕೂಟವನ್ನೇರ್ಪಡಿಸಲಾಗಿತ್ತು. ಅಂದಿನ ಮೈಸೂರು ಸರ್ಕಾರದ 2ನೇ ಉಪ ಮಂತ್ರಿಗಳಾಗಿದ್ದ ರಾಜಮಂತ್ರ ಪ್ರವೀಣ ಕೆ. ಅನಂತರಾಮನ್ ಅವರು ಸಭೆಯ ಅಧ್ಯಕ್ಷರಾಗಿದ್ದರು.

ನಾನೂ ಸಭೆಯಲ್ಲಿ ಒಬ್ಬ ಆಹ್ವಾನಿತ ಉಪಸ್ಥಿತನಿದ್ದೆ. ಉಪಹಾರಕ್ಕೆ ಮೊದಲು ಸಭೆಯ ವ್ಯವಸ್ಥಾಪಕರು ಸಭೆಯಲ್ಲಿ ಕುರುಹು ಮಾಡಿಕೊಂಡು ನಾನಿದ್ದ ಸ್ಥಳಕ್ಕೆ ಬಂದು, ಮುಖ್ಯ ಅತಿಥಿಗಳನ್ನು ಕುರಿತು ಏನಾದರೂ ಸ್ವಲ್ಪ ಮಾತನಾಡುತ್ತೀರ ? ಎಂದು ಕೇಳಿದರು. ಹಿಂದೂ-ಮುಂದೂ ನೋಡದೆ ನಾನು 'ಹೂಂ' ಎಂದು ಬಿಟ್ಟೆ. ಮಾತನಾಡುವ ಸರದಿ ಬಂದಾಗ, ನನ್ನ ಹೆಸರನ್ನು ಸಭೆಗೆ ತಿಳಿಸಿದರು, ನಾನು ನಿಂತೆ–ಭಗವತ್ ಪ್ರೇರಣೆ–ಪ್ರಾರಂಭಿಸಿದೆ.

"ಸಭಿಕರೇ, ಸಜ್ಜನರೇ,

....ಇಂದು ಶ್ರೀ ಶಂಕರನಾರಾಯಣರಾಯರು ನಮ್ಮೆಲ್ಲರಿಗೂ ಬಹಳ ಪರಿಚಿತರು. ಆದರೆ ಸಾಮಾನ್ಯನೊಬ್ಬನಿಗೆ ಅವರು ಹೇಗೆ ಪರಿಚಿತರಾಗುತ್ತಾರೆ ಅಥವಾ ಆದರು ಎನ್ನುವುದಕ್ಕೆ ಒಂದು ನಿದರ್ಶನವನ್ನು ಕೊಡುತ್ತೇನೆ. 1930–31ರ (10 ವರುಷಗಳ ಹಿಂದಿನ) ಮಾತು. ಅಂದಿನ ಬೆಂಗಳೂರು ಕೊಲಿಜಿಯೇಟ್ ಹೈಸ್ಕೂಲಿನ ಪ್ರಾಂಗಣದಲ್ಲಿ, ಸುಪ್ರಸಿದ್ಧ ರಸಾಯನ ಶಾಸ್ತ್ರ ವಿಜ್ಞಾನಿ ಆಚಾರ್ಯ ಪ್ರಫುಲ್ಲ ಚಂದ್ರ ರೇ (Sir P. C. Ray) ಭಾರತೀಯ ರಸಾಯನ ಶಾಸ್ತ್ರ (Indian Chemistry) ಎನ್ನುವುದನ್ನು ಕುರಿತು, ಉಪನ್ಯಾಸಮಾಲೆಯನ್ನು ನಡೆಸಿದರು. ಸಭೆಗೆ ಜನರು ಕಿಕ್ಕಿರಿದು ಬರುತ್ತಿದ್ದರು. ಕೆಲವರು ತಮ್ಮ ಸ್ವಂತ ಕಾರುಗಳಲ್ಲಿ ಬರುತ್ತಿದ್ದರು. ಸಭೆ ಮುಗಿದ ನಂತರ ಹಿಂತಿರುಗುತಿದ್ದರು. ಹಲವು ಕಾರುಗಳಲ್ಲಿ ಒಬ್ಬರು–ಇಬ್ಬರೇ ಇರುತ್ತಿದ್ದರು, ಆದರೂ ಅವು ಹೊರಟು ಹೋಗುತ್ತಿದ್ದವು. ಒಂದು ಕಾರಿನ ಬಳಿ ಮಾತ್ರ ಅದರ ಮಾಲೀಕರು ನಿಂತು ಬಸ್ ಕಂಡಕ್ಟರ್ ಕೂಗುವಂತೆ Anybody coming towards Basavangudi ಎಂದು ಕರೆಯುತ್ತಾ ಅವರ ಕಾರು ತುಂಬಿದ ಮೇಲೆಯೇ ಹೊರಟರು. ಆ ಮಾಲೀಕರು ಮತ್ಯಾರೂ ಅಲ್ಲದೆ ನಮ್ಮ ಮುಖ್ಯ ಅತಿಥಿಗಳಾದ ಶ್ರೀ ಶಂಕರನಾರಾಯಣರಾಯರು ! ಆಶ್ಚರ್ಯವೇ ? It shows the Genuine greatness of the Man" ಎಂದು ಹೇಳಿದೆ. ಅವರ ಬಳಿ ಈಗ Hambler ಓ, Essex ಓ Car ಇದೆ. Let him Roll in a Rolls Roys Car next—ಎಂದು ಹೇಳಿ, ನನ್ನ ಕನ್ನಡ ಇಂಗ್ಲೀಷ್ ಮಿಶ್ರಣದ ಭಾಷಣವನ್ನು ಹೇಗೋ ಹಾಗೆ ಉತ್ಸಾಹದಿಂದ ಮುಗಿಸಿದೆ.

ಸಭೆ ಮುಗಿದ ನಂತರ ಮೇಜರ್ ಮೂರ್ತಿಗಳು "ಭೇಷ್, You have brought out the Man as such" "It was a very good mixture of Kannada & English" ಎಂದರು. ಒಟ್ಟಿನಲ್ಲಿ ಎಲ್ಲರೂ ಸಂತೋಷಪಟ್ಟಿದ್ದರು.

1940–41ರ ಸುಮಾರು, ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿ 6,000-7,000 ಸ್ಕೌಟುಗಳು ಭಾಗವಹಿಸಿದ್ದ 9ನೇ ರಾಜ್ಯ ಮಟ್ಟದ ರ್‍ಯಾಲಿ ಏರ್ಪಾಡಾಗಿತ್ತು, ಶ್ರೀ ಪಿ. ಶಿವಶಂಕರ್‌ರವರು ಕ್ಯಾಂಪ್ ಚೀಫ್ ಆಗಿದ್ದರು. ಸಂಸ್ಥಾನದ

ಎಲ್ಲಾ ಕಡೆಗಳಿಂದಲೂ, ನೆರೆಭಾಗದ ಹೈದರಾಬಾದ್, ಮದರಾಸ್ ಮತ್ತು ಸಿಂಹಳ ರಾಜ್ಯಗಳಿಂದಲೂ ಸ್ಕೌಟುಗಳು ಬಂದು ಸೇರುತ್ತಿದ್ದರು. ರ್‍ಯಾಲಿಯ ಹಿಂದಿನ ದಿನದ ಸಂಜೆ ಶಂಕರನಾರಾಯಣರಾಯರು ಕೇಂದ್ರ ಟೆಲಿಫೋನಿನ ಬಳಿಯೇ ಇದ್ದು ನಿಮಿಷ-ನಿಮಿಷಕ್ಕೂ ಆ ಊರಿನವರು ಬಂದರೆ ? ಈ ಊರಿನವರು ಬಂದರೆ ? ಹುಡುಗರನ್ನು ಕರೆತರಲು ಬಸ್ಸು ಹೋಗಿದೆಯೇ ? ಎಂದು ವಿಚಾರಿಸುತ್ತಾ ಇದ್ದು, ಎಲ್ಲರೂ ಬಂದರೆಂದು ಖಚಿತವಾದ ಬಳಿಕ ನೆಮ್ಮದಿಯಾಗಿ ಮನೆಗೆ ಹಿಂತಿರುಗಿದರು. ಈ ಪ್ರೀತಿ ವಾತ್ಸಲ್ಯವನ್ನು ಕಾಣುವುದು ಅಷ್ಟು ಸುಲಭವಲ್ಲ ಎಂದು ನನ್ನ ಅನಿಸಿಕೆ.

ಈ ರೀತಿಯ ಸಜ್ಜನರನ್ನು ಈಗ ಕಾಣುವುದೇ ಅಪರೂಪ. ಶಂಕರನಾರಾಯಣರಾಯರು ಬಹು ವರುಷ, ಸರ್ಕಾರಿ ಅಡ್ವೋಕೇಟರಾಗಿ ಯಶಸ್ಸು ಗಳಿಸಿದ್ದರು. ಹೈಕೋರ್ಟ್ ನ್ಯಾಯಾಧೀಶರಾಗಿಯೂ ನೇಮಕವಾದರು. ಮುಂದೆ ರಾಜ್ಯದ ಮುಖ್ಯ ನ್ಯಾಯಾಧೀಶರೂ ಆದರು. ಅವರಿಗೆ ಬಹು ಹಿಂದಿನಿಂದಲೂ ಡಾ|| ಆನಿಬೆಸಂಟರು ಆರಂಭಿಸಿದ್ದ ಥಿಯಸಾಫಿಕಲ್ ಸಂಘ ಮತ್ತು ಅದರ ಕಾರ್ಯಕ್ರಮಗಳಲ್ಲಿ ಆಸಕ್ತಿ ಇತ್ತು. ಆನಿಬೆಸಂಟರೇ ಭಾರತೀಯ ಸ್ಕೌಟ್ ಬೆಳವಣಿಗೆಗೆ ಪ್ರೇರಕರು. ಆ ಕಾರಣದಿಂದಲೇ ಶ್ರೀ ಶಂಕರನಾರಾಯಣರಾಯರು ನಮ್ಮ ರಾಜ್ಯ ಚಳುವಳಿಯಲ್ಲಿ ಭಾಗವಹಿಸಿರಬೇಕು ಎಂದು ಭಾವಿಸುತ್ತೇನೆ. ಅವರ ಸಹಜ ಸ್ವಭಾವವೂ ಈ ತೆರನ ವಿಶ್ವಬಾಂಧವ್ಯಕ್ಕೆ ಮನವೊಲಿದಿರಬೇಕು.

ಆಗಿನ ವೇಳೆಗೆ ಆಗಲೇ ಶ್ರೀ ಶಂಕರನಾರಾಯಣರಾಯರು ಎರಡು ದಶಕಗಳ ಸಮೀಪ ಮುಖ್ಯ ಸ್ಕೌಟ್ ಕಮೀಷನರಾಗಿದ್ದರು. ತಾವೇ ಈ ಸ್ಥಾನಕ್ಕೆ ಸರಿಯಾದವರು ಎಂದು ತಮ್ಮ ನಡತೆಯಿಂದ, ನಿರ್ವಹಣೆಯಿಂದ, ನಿಸ್ಪೃಹತೆಯಿಂದ, ನಿಷ್ಠೆಯಿಂದ, ಜನರ ಮನಸ್ಸಿನಲ್ಲೂ, ಅಧಿಕಾರಿಗಳ ಅಭಿಪ್ರಾಯದಲ್ಲೂ ಒಂದು ದೃಢವಾದ ನಂಬಿಕೆಯನ್ನುಂಟು ಮಾಡಿದ್ದರು.

ಸ್ಕೌಟು ಚಳುವಳಿಯಲ್ಲೇ ಅಲ್ಲದೇ ಇತರ ಪ್ರಗತಿಪರ ಸಮಾಜ ಸುಧಾರಕ ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಶ್ರೀ ಶಂಕರನಾರಾಯಣರಾಯರು ಭಾಗವಹಿಸುತ್ತಿದ್ದರು.

ಈ ಆದರ್ಶ, ಅಮರ ಜೀವಿಯ ನೆನಪು, ನಮಗೆ ಬೆಳಕು ನೀಡಲಿ ಎಂದು ಪ್ರಾರ್ಥಿಸುತ್ತೇನೆ.

**ಟಿ. ರಾಜೈಯ್ಯಂಗಾರ್**
**10-8-1996**

(ಶ್ರೀ ಟಿ. ರಾಜೈಯ್ಯಂಗಾರ್‌ರವರು ರಾಜ್ಯದ ಅತಿ ಹಳೆಯ ಮುಕ್ತ ದಳವಾದ ಮಲ್ಲೇಶ್ವರಂನ ಶ್ರೀ ಚಾಮುಂಡಿ ದಳದಲ್ಲಿ ಸ್ಕೌಟ್ ಆಗಿದ್ದವರು. ಮುಂದೆ ತಮಿಳುನಾಡಿನ ಕೊಯಮುತ್ತೂರಿನಲ್ಲಿ ನೆಲೆಸಿ ಅಲ್ಲಿ ಸಹಾಯಕ ಜಿಲ್ಲಾ ಆಯುಕ್ತರಾಗಿ, ಜಿಲ್ಲಾ ಕಾರ್ಯದರ್ಶಿಗಳೂ ಆಗಿ ಸೇವೆ ಸಲ್ಲಿಸಿದವರು. ಎಂಭತ್ತರ ಹರೆಯದಲ್ಲೂ ಸ್ಕೌಟಿಂಗ್ ಬಗ್ಗೆ, ಕನ್ನಡದ ಬಗ್ಗೆ ಕಳಕಳಿಯಿಂದ ಸ್ಪಂದಿಸುವವರು. ಇದು ಅವರ ಲೇಖನ ಮಾಲೆಯ ಎರಡನೆಯ ಕಂತು).

—ಸಂಪಾದಕ

# ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿಗಳ ಕಛೇರಿ

ಕೇಂದ್ರೀಕೃತ ದಾಖಲಾತಿ ಘಟಕ, ಕಾವೇರಿ ಭವನದ ಎದುರು, ಕೆಂಪೇಗೌಡ ರಸ್ತೆ, ಬೆಂಗಳೂರು–2

ಸಂಖ್ಯೆ : ಸಿ.ಎ.ಸಿ. ಸ್ಪಷ್ಟೀಕರಣ–12/96-97. ದಿನಾಂಕ : 26ನೇ ಆಗಸ್ಟ್ 1996

**ಪ್ರೊ. ಎಂ. ಸೂರ್ಯನಾರಾಯಣಪ್ಪ**
ರಾಜ್ಯ ಕಾರ್ಯದರ್ಶಿ
ಭಾರತ ಸ್ಕೌಟ್ಸ್ ಮತ್ತು ಗೈಡ್ಸ್
ಕರ್ನಾಟಕ ರಾಜ್ಯ ಹೆಡ್‌ಕ್ವಾರ್ಟರ್ಸ್
ಕೊಂಡಜ್ಜಿ ಬಸಪ್ಪ ರಸ್ತೆ
ಕೋಟೆ, ಬೆಂಗಳೂರು-560 002

**ಮಾನ್ಯರೆ,**

ವಿಷಯ : ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸ್‌ಗಳ ದಾಖಲಾತಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

ಉಲ್ಲೇಖ : ನಿಮ್ಮ ಕೋರಿಕೆ ಮೇರೆಗೆ.

ವಿಷಯಕ್ಕೆ ಸಂಬಂಧಿಸಿದಂತೆ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸ್‌ಗಳ ದಾಖಲಾತಿ ಆಯ್ಕೆಯಲ್ಲಿ ಕೆಳಕಂಡಂತೆ ಮೀಸಲಾತಿಯನ್ನು ನೀಡಲಾಗಿದ್ದು, ಅರ್ಹತೆ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು. ಯಾವುದೇ ರೀತಿಯ ಸಂದರ್ಶನವಿರುವುದಿಲ್ಲ.

ಸ್ಕೌಟ್ಸ್ ಮತ್ತು ಗೈಡ್ಸ್ — 10 ಸೀಟುಗಳು

ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಕನಿಷ್ಠ ಮೂರು ವರ್ಷಗಳ ಕಾಲ ಸೇವೆ ಸಲ್ಲಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನಿಂದ ರಾಜ್ಯಮಟ್ಟದಲ್ಲಿ ನಡೆಸಲಾದ ಜಾಂಬೋರೀಗಳಲ್ಲಿ ಭಾಗವಹಿಸಿರಬೇಕು. ಅಥವಾ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ರಾಷ್ಟ್ರಪತಿಗಳ ಪ್ರಶಸ್ತಿಯನ್ನು ಪಡೆದಿರುವ ಅಭ್ಯರ್ಥಿಗಳು ಈ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

ತಮ್ಮ ನಂಬುಗೆಯ,

(ಸಹಿ/-)
ವಿಶೇಷಾಧಿಕಾರಿಗಳು,
ಕೇಂದ್ರಿಕೃತ ದಾಖಲಾತಿ ಘಟಕ




ರಾಜ್ಯ ಮಟ್ಟದ ಪ್ರಥಮ ಕವನ ಗಾಯನ ಕಾರ್ಯಾಗಾರದ ವೇಳೆಯಲ್ಲಿ ವಿಖ್ಯಾತ ಹಿಂದೂಸ್ಥಾನಿ ಗಾಯಕಿ ಡಾ|| ಗಂಗೂಬಾಯಿ ಹಾನಗಲ್‌ರವರನ್ನೂ, ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರನ್ನೂ ಕಾರ್ಯಾಗಾರದ ನಾಯಕರಾದ ಶ್ರೀ ಲೋಂಡೆಯವರು ಸ್ವಾಗತಿಸುತ್ತಿರುವುದು.

---

**"I Shall work for**

**An India in which the poorest shall feel that it is their country in whose making they have an effective voice;**

**An India in which there shall be no high class and low class of people;**

**An India in which all communities shall live in perfect harmony."**

**—Mahatma Gandhi**

Published for the Bharat Scouts and Guides, Karnataka State Headquarters, Prof. P. Sivashankar Circle, Kondajji Basappa Road Fort, Bangalore-560 002, by the State Secretary and Printed by Sri B. Basavaiah, M.D. at S.J.M. Mudrana Pvt. Ltd. Bangalore-560 027 Phone : 2236469

To,

THE BHARAT SCOUTS AND GUIDES
Prof. P. Sivashankar Circle
Kondajji Basappa Road
Fort, Bangalore-560 002